# 'ಆಧುನಿಕ ಚೀನಾ'



ಎಸ್. ಅನಂತನಾರಾಯಣ



ಪ್ರಚಲಿತ ಸಾಹಿತ್ಯ
ಬೆಂಗಳೂರು ನಗರ

೧೯೪೫ ರೂ. ೧



ಸಂಪಾದಕರು

ಕುಮಾರ ವೆಂಕಣ್ಣ

ತ. ರಾ. ಸುಬ್ಬರಾಯ

ಸಲಹೆಗಾರರು

ಅ. ನ. ಕೃಷ್ಣರಾಯ

ವಿದ್ವಾನ್ ಬಿ. ಶಂಕರಭಟ್ಟ





— ಅರ್ಪಣೆ —

ನನ್ನ ಮೂರು ವರ್ಷದ

ಸಹಪಾಠಿ

ಗೆಳೆಯ ಗೆಳತಿಯರಿಗೆ

— ಅನಂತ —





ಪ್ರಕಾಶಕರು

ಕುಮಾರ ವೆಂಕಣ್ಣ

ಪ್ರಚಲಿತ ಸಾಹಿತ್ಯ

೩೭, ಮುನವಾರ್ತೆ ಪೇಟೆ

ಬೆಂಗಳೂರು ನಗರ

ಮುದ್ರಕರು

ಎಚ್. ಎಲ್. ಪ್ರಸಾದ್

ದಿ ಟೌನ್ ಪ್ರೆಸ್

ಪತ್ರಪ್ಪ ರೋಡ್

ಬೆಂಗಳೂರು ಸಿಟಿ

# ಮುಮ್ಮಾತು

ಕನ್ನಡ ಭಾಷೆಗೆ ಪರಭಾಷೆಗಳ ಅಪೂರ್ವ ಗ್ರಂಥಗಳನ್ನು ಅನುವಾದ ಮಾಡಬೇಕು. ಕನ್ನಡದಲ್ಲೂ ಹೊಸ ಬಗೆಯ ಹೊಸ ವಿಚಾರಗಳ ಮೇಲೆ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸಬೇಕು. ಇಂದು ನಮ್ಮ ಕನ್ನಡ ಜನ ತಿಳಿಯದಿರುವ ನೂರಾರು ವಿಚಾರಗಳನ್ನು ಅವರಿಗೆ ಅವರದೇ ಆದ ಕನ್ನಡದಲ್ಲಿ ತಿಳಿಸಲು ಬೇಕಾದ ಗ್ರಂಥಗಳನ್ನು ಒದಗಿಸಬೇಕು. ಎಂತಲೇ ಈ ಸಂಸ್ಥೆಯನ್ನು ಸ್ಥಾಪಿಸಿದ್ದೇವೆ.

ಆಗಲೇ ಹಲವು ಕನ್ನಡ ಪ್ರೇಮಿಗಳು ನಮ್ಮ ಗ್ರಂಥಗಳ ವಿಕ್ರಯದ ಕಾರ್ಯವನ್ನು ಸಾಹಸದಿಂದ ನಡೆಸಲು ಮುಂದೆ ಬಂದಿದಾರೆ. ನಮ್ಮನ್ನು ಪ್ರೋತ್ಸಾಹಿಸಿ, ಮುನ್ನಡೆಯಿರಿ ಎಂದಿದಾರೆ.

ಹಿರಿಯ ಸಾಹಿತಿಗಳಾದ ಶ್ರೀ ಅ. ನ. ಕೃಷ್ಣರಾಯರೂ, ವಿದ್ವಾನ್ ಬಿ. ಶಂಕರ ಭಟ್ಟರೂ, ನಮ್ಮ ಉದ್ಯಮವನ್ನು ಹರಸಿ, ನಮ್ಮ ಸಲಹೆಗಾರರಾಗಿರಲು ಒಪ್ಪಿ, ಎಲ್ಲ ಬಗೆಯಿಂದಲೂ ನೆರವು ನೀಡಲು ಮುಂದೆ ಬಂದಿದಾರೆ.

ಕಾಗದದ ಕ್ಷಾಮ, ಮಿತವಾಗಿ ಅಚ್ಚುಮಾಡಬೇಕಾದ ಪರಿಸ್ಥಿತಿ ಇವುಗಳಿಂದಾಗಿ ಹೆಚ್ಚಿಗೆ ಪ್ರತಿಗಳನ್ನು ಮುದ್ರಿಸುವುದು ಸಾಧ್ಯವಿಲ್ಲ. ಈಗಾಗಲೇ ಪ್ರತಿನಿಧಿಗಳಾಗಿ ನಮ್ಮೊಡನೆ ಸಹಕರಿಸಲು ನಿಂದವರ ಬೇಡಿಕೆಯನ್ನು ಪೂರೈಸುವುದೂ ಕಷ್ಟವಾಗಿದೆ. ಎಂತಲೇ ಹಳ್ಳಿಹಳ್ಳಿಗಳ ಓದುಗರೂ ನಮ್ಮ ಗ್ರಂಥಗಳನ್ನು ಪಡೆಯುವುದು ಸಾಧ್ಯವಾಗಲೆಂದು, ಚಂದಾದಾರರಾಗುವ ವ್ಯವಸ್ಥೆಯೊಂದನ್ನು ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದೇವೆ. ಓದುಗರು ಇದರ ಅನುಕೂಲವನ್ನು ಪಡೆಯಬೇಕಾಗಿ ಬಿನ್ನಹ.

ಇಂದಿನ ಪ್ರಪಂಚದ ಅತಿ ಮಹತ್ವದ ಸಮಸ್ಯೆಯಾಗಿದೆ, ಚೀನಾದೇಶದ ರಾಜಕೀಯ. ನಮ್ಮ ನೆರೆಯದಾದ ಈ ರಾಷ್ಟ್ರದ ಬಗ್ಗೆ ತಿಳಿಯಹೇಳುವ ಗ್ರಂಥ ಕನ್ನಡ ಭಾಷೆಯಲ್ಲೇ ಇಲ್ಲ. ಅಂದಾಗ ನಮ್ಮ ಮೊದಲ ಪ್ರಕಟನೆಯಾಗಿ ಪ್ರಕಟಿಸಲು, ನಮಗೆ ಈ ಗ್ರಂಥವನ್ನು ಬರೆದು ಕೊಟ್ಟ ಲೇಖಕರಿಗೆ ನಮ್ಮ ವಂದನೆಗಳು.

ನಮ್ಮ ಯೋಜನೆ ಮಹತ್ತಾದುದು. ಆದರೆ, ಆ ಅಭೂತಪೂರ್ವ ಯೋಜನೆಯನ್ನು ನಾವು ಆರಂಭಿಸಲು ಕಾರಣಕರ್ತರು ಟೌನ್ ಪ್ರೆಸ್ಸಿನ ಒಡೆಯರಾದ ಶ್ರೀ ಲಕ್ಷ್ಮಣ ಪ್ರಸಾದರು. ಅವರ ಭರವಸೆ, ಸಹಕಾರಗಳಿಂದ ನಾವು ನಮ್ಮ ಮುಂದಿರಿಸಿಕೊಂಡ ಉದ್ದೇಶಗಳನ್ನು ಸಾಧಿಸುತ್ತೇವೆ ಎಂಬ ಧೈರ್ಯ ನಮಗಿದೆ. ಗೆಳೆಯರಾದ ಪ್ರಸಾದರ ಸಹಕಾರ ಮರೆಯುವಂತಹದಲ್ಲ.

ಕನ್ನಡಿಗರು ಎಲ್ಲ ಬಗೆಯ ಸಹಕಾರವಿತ್ತು, ಮುಖ್ಯವಾಗಿ ನಮ್ಮ ಪ್ರಕಟನೆಗಳನ್ನು ಕೊಳ್ಳುವುದರ ಮೂಲಕ ಸಹಕರಿಸಿ ಸಾಹಿತ್ಯದ ಬೆಳವಣಿಗೆಗೆ ಸಹಕಾರಿಗಳಾಗಬೇಕಾಗಿ ವಿನಂತಿ.

—ಪ್ರಕಾಶಕರು.

# ನಮ್ಮ ಮುಂದಿನ ಯೋಜನೆ

ವರ್ಷಕ್ಕೆ ಸುಮಾರು ೧೦೦ ಪುಟಗಳ ೧೨ ಕ್ಕೂ ಹೆಚ್ಚು ಗ್ರಂಥಗಳನ್ನು ಪ್ರಕಟಿಸಲು ನಿಶ್ಚಯಿಸಿದ್ದೇವೆ. ಪ್ರತಿಯೊಂದರ ಬೆಲೆ ಸುಮಾರು ರೂ. ೧.

ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ವಿಚಾರದ ಅತ್ಯುತ್ಕೃಷ್ಟ ಗ್ರಂಥಗಳನ್ನೂ, ಕಾದಂಬರಿ ಇತ್ಯಾದಿಗಳನ್ನೂ ಪ್ರಕಟಿಸಲೆಂದೇ ಈ ಸಂಸ್ಥೆ ತಲೆ ಎತ್ತಿದೆ.

ಗ್ರಂಥಗಳು ತಪ್ಪದೆ ದೊರೆಯಬೇಕಾದಲ್ಲಿ, ರೂ. ೧೦ ಮುಂಗಡ ಕಳುಹಿಸಿ ಚಂದಾದಾರರಾಗುವುದು ಹಿತ. ಹೀಗೆ ಚಂದಾ ಕೊಟ್ಟವರಿಗೆ ನಾವೇ ಅಂಚೆವೆಚ್ಚ ವಹಿಸಿ ಪುಸ್ತಕಗಳನ್ನು ಕಳುಹಿಸುತ್ತೇವೆ. ಚಂದಾ ಮುಗಿದೊಡನೆ ತಿಳಿಸಲಾಗುವುದು.

○ **ಡಾ। ಕೋಟ್ನಿಸ್**:—ಕಾಂಗ್ರೆಸ್ ಚೀನಾಕ್ಕೆ ಕಳುಹಿದ ವೈದ್ಯ ದಳದಲ್ಲಿ ಒಬ್ಬರಾಗಿ ಹೋಗಿ, ಚೀನಾ ಜನತೆಯ ಸೇವೆ ನಡಿಸಿ, ತನ್ನನ್ನೇ ತಾನು ಬಲಿದಾನವಾಗಿ ಅರ್ಪಿಸಿದ ಅಮರ ತ್ಯಾಗಿಯ ಕತೆ! ಲೇಖಕರು—ಖ್ವಾಜಾ ಅಹ್ಮದ್ ಅಬ್ಬಾಸ್. ಅನುವಾದಕರು—ತ. ರಾ. ಸು.

○ **ಇಂಕಿಲಾಬ್**:—೧೯೧೯ರಿಂದ ಆಗಸ್ಟ್ ದುರಂತದ ವರೆಗಣ ಭಾರತದ ಸ್ವಾತಂತ್ರ್ಯ ಚಳುವಳಿ. ಮೂರು ಕಾದಂಬರಿಗಳಲ್ಲಿ ಚಿತ್ರಿತವಾಗಿದೆ. ಬರೆದವರು—ಅಬ್ಬಾಸ್. ಅನುವಾದಕರು—ತ. ರಾ. ಸು.

○ **ಆರನೆ ಸ್ವರ್ಗ—ರಷ್ಯಾ**:—ರಷ್ಯಾದ ಕುರಿತಾಗಿ ಇಂತಹದೊಂದು ಗ್ರಂಥ ಇದೇ. ಇಂಗ್ಲೆಂಡಿನ ಕ್ರೈಸ್ತ ಪಾದ್ರಿಗಳು ಇಂಗ್ಲಿಷಿನಲ್ಲಿ ಬರೆದುದರ ಕನ್ನಡ ಅನುವಾದ.

○ **ಯುಗಪುರುಷ ಲೆನಿನ್**:—ಜಗತ್ತಿನ ದೀನ ಜನತೆಗಾಗಿ ಹೋರಾಡಿ ಭೂಲೋಕದಲ್ಲಿ ಬಡವರ ಸ್ವರ್ಗ ಸೃಜಿಸಿದ ಮಹಾತ್ಮನ ಜೀವನ ಚರಿತ್ರೆ.
ಲೇಖಕರು—ಅ. ನ. ಕೃಷ್ಣರಾಯರು,

○ **ವೇದಾಂತದ ಗೂಢ:**—ವೇದಾಂತದ ಬಗ್ಗೆ ಎಲ್ಲರಿಗೂ ತಿಳಿಯು ವಂತೆ ಬರೆಯಲಾದ ಅಪೂರ್ವ ಗ್ರಂಥ. ಲೇಖಕರು-ಅ. ನ. ಕೃಷ್ಣರಾಯ.

○ **ಭಾರತದ ಕ್ರಾಂತಿಕಾರರು:**-ದೇಶಕ್ಕಾಗಿ ಜೀವನವನ್ನು ಧಾರೆ ಎರೆದ ಕೆಲ ವಿಭೂತಿಗಳ ಜೀವನ ಕತೆ. ಲೇಖಕರು-ಬಿ. ಶಂಕರಭಟ್ಟ, ವಿದ್ವಾನ್.

○ **ಅಜೇಯ ಜೀವ:**—ಭಾರತದ ಯುವಕರ ದಂಡನಾಯಕ ಪಂಡಿತ ಜವಹರಲಾಲ ನೆಹರುಗಳ ಜೀವನ ಕತೆ. ಲೇಖಕ-ತ. ರಾ. ಸು.

○ **ಮುತ್ತಿನ ಚಿಪ್ಪು:**-(ಕಾದಂಬರಿ) ಲೇ: ಕೆ. ನಾಗೇಶರಾಯ. ಹೊಸ ಬಗೆಯ ಕಾದಂಬರಿಯೊಂದು ಹೊಸತಾಗಿ ಬರಲಿದೆ.

○ **ಆಗಸ್ಟ್ ದುರಂತ:**—ಆಗಸ್ಟ್ ೯ ರಿಂದ ಇದುವರೆಗಣ ಭಾರತದ ದುರಂತ ಇತಿಹಾಸ.

○ **ಅಣ್ಣ-ತಂಗಿ:**—(ಕಾದಂಬರಿ) ಲೇಖಕ-ಎಂ. ವಿ. ಮುನಿರಾಜು.

ಅಲ್ಲದೆ ಭಾರತ ಸಂಸ್ಕೃತಿಯ, ವೇದ-ಶಾಸ್ತ್ರ-ಪುರಾಣ-ಇತಿಹಾಸಗಳ ವಿಮರ್ಶಾತ್ಮಕ ನೋಟಗಳನ್ನು ಚಿತ್ರಿಸಿದ ೨೫ ಕತೆಗಳ ಸಂಗ್ರಹ "ವೋಲ್ಗಾ-ಗಂಗಾ" ನಾಲ್ಕು ಭಾಗಗಳಲ್ಲಿ ಪ್ರಕಟವಾಗುವುದು. ಜಗತ್ತಿನಲ್ಲಿ ಇದುವರೆಗೆ ಇಂತಹ ಗ್ರಂಥ ಪ್ರಕಟವಾಗಿಲ್ಲ. ಪ್ರತಿಯೊಬ್ಬನೂ ತನ್ನ ಧರ್ಮ-ಜಾತಿ-ಪಂಥಗಳ ನೈಜ ಗೂಢ ತಿಳಿಯಲು ಇದನ್ನು ಓದಬೇಕು. ಲೇಖಕರು-ಮಹಾ ಪಂಡಿತ ತ್ರಿಪಿಟಿಕಾಚಾರ್ಯ ರಾಹುಲ ಸಾಂಕೃತ್ಯಾಯನ, ಲೆನಿನ್‌ಗ್ರಾಡ್ ಯೂನಿವರ್ಸಿಟಿ, ರಷ್ಯಾ.

## ಪ್ರಚಲಿತ ಸಾಹಿತ್ಯ,

**೩೭, ಮನವಾರ್ತೆಪೇಟೆ, ಬೆಂಗಳೂರು ನಗರ**

# ಮೊದಲ ಮಾತು

ಕನ್ನಡದಲ್ಲಿ ರಾಜಕೀಯ ಸಾಹಿತ್ಯ ತುಂಬಾ ವಿರಳ. ಎಲ್ಲೋ ಅಲ್ಲೊಂದು ಇಲ್ಲೊಂದು ಪುಸ್ತಕ ಮಾತ್ರ ಹೊರಬೀಳುತ್ತಿದೆ; ಅದೂ ಈಗೀಗ. ಚೀನದ ವಿಚಾರವಾಗಿ ಕನ್ನಡದಲ್ಲಿ ಇದುವರೆಗೂ ಒಂದಾದರೂ ಪುಸ್ತಕ ಬಾರದಿರುವುದು ಶೋಚನೀಯ. ಆ ಕೊರತೆಯನ್ನು ನೀಗಿಸುವ ಪ್ರಯತ್ನದ ಫಲ ಇದು.

ಜಪಾನಿನ ಧಾಳಿಯನ್ನು, ಏಳು ವರ್ಷಗಳ ಕಾಲ ಇದುರಿಸಿ ನಿಂತ ಚೀನದ ಶಕ್ತಿಯೇನು? ಆ ಶಕ್ತಿಯ ಮೂಲ ಯಾವುದು? ಆಧುನಿಕ ಶಸ್ತ್ರಾಸ್ತ್ರ, ಮಾರಕ ಯಂತ್ರ ಒಂದೂ ಇಲ್ಲದ ಚೀನಾ ಇಷ್ಟು ಕಾಲ, ಇನ್ನೂ ಸೋಲದೆ ಉಳಿದಿರುವ ಗುಟ್ಟೇನು? ಮುಂದೆಯೂ ಅಜೇಯವಾಗಿಯೇ ಉಳಿದೀತೇ? ಹಾಗೆ ಉಳಿಯಬೇಕಾದರೆ ಯಾವ ದಾರಿ? ಈಗಿನ ಸ್ಥಿತಿ ಏನು? ಇವುಗಳನ್ನೆಲ್ಲ ಸೂಕ್ಷ್ಮವಾಗಿ ವಿವೇಚಿಸುವುದೇ ಈ ಪುಸ್ತಕದ ಉದ್ದೇಶ.

ಇದರಲ್ಲಿ ಬಹುಭಾಗ ನ್ಯಾಯವಾಗಿಯೇ ಚೀನದ ಕಮ್ಯೂನಿಸ್ಟರ ವಿಚಾರ. ಏಕೆಂದರೆ ಅವರಿಲ್ಲದಿದ್ದರೆ ಚೀನಾದಲ್ಲಿ ಜಪಾನೀ ವಿರೋಧಿರಂಗ ಇರುತ್ತಿರಲಿಲ್ಲ; ಈ ವೇಳೆಗಾಗಲೇ ಅದು ಜಪಾನಿನ ಕೈಗೊಂಬೆಯಾಗಿ ಹೋಗಿ ಬಹುಕಾಲವಾಗಿರುತ್ತಿತ್ತು. ಚೀನದಲ್ಲಿ ಐಕ್ಯರಂಗ ಹಾಗೂ ಹೀಗೂ ಸಾಧಿಸಲ್ಪಟ್ಟಿತು. ಆದರೂ ಸಮಸ್ಯೆಗಳು ಮುಗಿದಿಲ್ಲ. ಅವುಗಳನ್ನು ಬಗೆಹರಿಸುವುದು ಹೇಗೆ? ಈ ಎಲ್ಲ ವಿಷಯಗಳ ವಿಹಂಗಮ ವಿವೇಚನೆ ಇಲ್ಲಿದೆ.

ಈ ಪುಸ್ತಕದ ಸಿದ್ಧತೆಯಲ್ಲಿ ನನಗೆ ಅನೇಕ ಮಂದಿ ನೆರವಾಗಿದ್ದಾರೆ. ಗೆಳೆಯರಾದ ಶ್ರೀಧರ, ಎಸ್. ವಿ. ಕೃಷ್ಣಮೂರ್ತಿ, ಶಾರದಾ ಪ್ರಸಾದ್ ಮತ್ತು ಕುಮಾರ ವೆಂಕಣ್ಣನವರ ಸಹಾಯ ಬಹಳ. ಅವರಿಗೆಲ್ಲಾ ನನ್ನ ಕೃತಜ್ಞತೆಗಳು.

ಇದನ್ನು ಮುದ್ರಿಸಿ, ಜನರ ಕಣ್ಣೆದುರಿಗಿಟ್ಟ ಪ್ರಚಲಿತ ಸಾಹಿತ್ಯ ಸಂಸ್ಥೆಯವರ ಗೆಳೆತನದ ಉಪಕಾರ ನಾನೆಂದೂ ಮರೆಯಲಾರೆ.

ಮೈಸೂರು,
೧–೪–೧೯೪೫

ಎಸ್. ಅನಂತನಾರಾಯಣ.

# Bibliography


| | |
|---|---|
| Red Star Over China | Edgar Snow |
| Scorched Earth | " |
| New China | Nym Wales |
| China Struggles for Unity | Pringle |
| Mowrer in China | Mowrer |
| Makers of New China | S. S. Batliwala |
| China's New Democracy | Mao Tse Tung |
| Critique of China's Destiny | Chen Pai Ta |
| China Builds for Democracy | Nym Wales |
| China Calling | Hiren Mukherjee |
| China Fights for Freedom | Anna Louise Strong |
| China, Spain and the War | Jawaharlal Nehru |
| Chungking Diary | D. F. Karaka |
| And One Did Not Come Back | K. A. Abbas |
| Tanaka Memorandum | Baron Tanaka |
| Who Threatens China's Unity | Mohan Kumar-Mangalam |
| The Real Face of Japan | Jack Chen |

And the Journal "Peoples War"

# ಆಧುನಿಕ ಚೀನಾ

———:———

## ಹಿನ್ನೆಲೆ

ಚೀನದಲ್ಲಿ ಈಗಾಗಲೇ ಏಳು ವರ್ಷಗಳಿಂದ ಸತತ ಸಂಗ್ರಾಮ ಸಾಗುತ್ತಿದೆ. ಜಗತ್ತಿನ ಇತಿಹಾಸದಲ್ಲಿಯೇ ಹಿಂದೆ ಎಂದೂ ಕಾಣದ ರೀತಿಯಲ್ಲಿ ಚೀನರು ಶತ್ರುವನ್ನು ಎದುರಿಸುತ್ತಿದ್ದಾರೆ. ಉಳಿದ ಜಗತ್ತೆಲ್ಲವೂ ಯಾರನ್ನು "ಕೂಲಿ" "ಅಫೀಮಿನ ದಾಸ" ಎಂದು ತಿರಸ್ಕಾರದಿಂದ ಕಾಣುತ್ತಿದ್ದಿತೋ, ಅದೇ ಚೀನದ ರೈತರು, ಕಾರ್ಮಿಕರು, ಇಂದು ಸವ್ಯಸಾಚಿಯಾಗಿ ಜಪಾನೀ ಧಾಳಿಗಳನ್ನು ವಿರೋಧಿಸುತ್ತಿದ್ದಾರೆ. ತಮ್ಮ ನಾಡು ತಮ್ಮದು, ಅದನ್ನು ಯಾರಿಗೂ ಅಧೀನವಾಗಲು ಬಿಡುವುದಿಲ್ಲ—ಅದಕ್ಕಾಗಿ ಪ್ರಾಣ ಕೂಡ ತ್ಯಜಿಸುತ್ತೇವೆ ಎನ್ನುವ ಕೆಚ್ಚೆದೆ, ವೀರ ಸಂಕಲ್ಪ ಚೀನೀ ಜನತೆಯದು.

ಆದರೆ ಚೀನದ ಆಕ್ರಮಣ ನಡೆದಾಗ ಜಗತ್ತಿನ ಎಲ್ಲ ಕಡೆಯಲ್ಲಿಯೂ ರಾಜಕೀಯಜ್ಞರು ಚೀನದ ಪತನ ಈಗಲೋ ಆಗಲೋ ಆಗಿಹೋಗುವುದೆಂದು ಭವಿಷ್ಯ ನುಡಿದಿದ್ದರು. ೬ ತಿಂಗಳ ಕಾಲದಲ್ಲಿ ಚೀನ ನುಚ್ಚುನೂರಾಗುವುದೆಂಬುದು ಅವರ ನಿರೀಕ್ಷೆ. ಆಧುನಿಕ ಸಾಮಗ್ರಿಗಳಿಂದ ಸಜ್ಜಿತವಾದ ಜಪಾನೀ ಸೈನ್ಯಗಳ ಮುಂದೆ, ಇನ್ನೂ ಪುರಾತನ ಪದ್ಧತಿಗಳಿಗೇ ಕಟ್ಟುಬಿದ್ದ ಚೀನ ಹೇಗೆ ತಾನೇ ನಿಂತೀತು? ಬಿರುಗಾಳಿಯಲ್ಲಿ ಮರಳು ಕಣಗಳು ಸಿಕ್ಕಿದಂತೆ ಚೀನರು ದಿಕ್ಕು ದೆಸೆಗಾಣದಾಗುತ್ತಾರೆಂದು ಈ ರಾಜಕೀಯಜ್ಞರ ಅಭಿಪ್ರಾಯ. ಚೀನ ಜಪಾನಿನ ಅಧೀನವಾಗಿಹೋಗುವುದು ಖಂಡಿತವೆನಿಸಿತ್ತು. ಈ ರೀತಿಯಲ್ಲಿ ಚೀನದ ವಿಷಯವಾಗಿ ನಿರಾಶಾ ಮನೋಭಾವ ಎಲ್ಲ ಕಡೆಯೂ ಮೂಡಬೇಕಾದರೆ ಕಾರಣವೇನು? ಇದನ್ನು ಅರ್ಥ ಮಾಡಿಕೊಳ್ಳಲು ಸೂಕ್ಷ್ಮವಾಗಿ ನೂತನ ಚೀನದ ಹಿನ್ನೆಲೆಯನ್ನು ತಿಳಿಯುವುದು ಅವಶ್ಯಕ.

ಚೀನ ಸಮಗ್ರ ಯೂರೋಪಿಗಿಂತಲೂ ಸ್ವಲ್ಪ ದೊಡ್ಡ ಪ್ರದೇಶ. ಒಂದು ಕಡೆ ಹಿಮಾಲಯಾ ಪರ್ವತಗಳು, ಒಂದು ಕಡೆ ಮಂಗೋಲಿಯ ಮತ್ತು ತುರ್ಕಿಸ್ತಾನಗಳ ಮರುಭೂಮಿಗಳು, ಮತ್ತೊಂದು ಕಡೆ ಮಲಯದ ಕಾಡುಗಳು, ಇನ್ನೊಂದು ಕಡೆ ಪೆಸಿಫಿಕ್ ಮಹಾಸಾಗರ. ಇದೇ ಚೀನದ ಸ್ವಾಭಾವಿಕ ಮೇರೆಗಳು. ಆದರೆ ಚೀನಕ್ಕೆ ಧಾಳಿಕಾರರ ಕಾಟವೇನೂ ತಪ್ಪಿದ್ದಲ್ಲ. ಮಂಚೂರಿಯ ಮತ್ತು ಮಂಗೋಲಿಯಗಳ ಮೂಲಕ ಎಷ್ಟೋ ಮಂದಿ ಧಾಳಿಕಾರರು ಚೀನವನ್ನು ಮುತ್ತಿದ್ದಾರೆ.

ಟಿಬೆಟಿನಲ್ಲಿ ಜನಿಸಿದ ಏಷ್ಯದ ಹಿರಿಯ ನದಿ ಯಾಂಗ್ಟ್ಸೆಯು ಚೀನದಲ್ಲಿ ಹರಿದು ಪೆಸಿಫಿಕ್ ಸಾಗರವನ್ನು ಸೇರುತ್ತದೆ. ಇದು ಮತ್ತು ಇದರ ಉಪನದಿಗಳಿಂದ ಸುಮಾರು ೨೦ ಕೋಟಿ ಜನರ ಭೂಮಿಕಾಣಿಗೆ ನೀರೊದಗುತ್ತದೆ. ಈ ಭಾಗವೇ ಮಧ್ಯ ಚೀನ. ಉತ್ತರ ಚೀನದಲ್ಲಿ ಭೂಮಿ ಫಲವತ್ತಾಗಿದೆ. ಆದರೆ ಅಲ್ಲಿ ನೀರಿನ ಅಭಾವ ಹೆಚ್ಚು.

ಸಾವಿರಾರು ವರ್ಷಗಳಿಂದ ಚೀನೀ ರೈತನು ಬಹಳ ಕಷ್ಟದಿಂದ ಜೀವಿಸುತ್ತಿದ್ದಾನೆ. ಚೀನದ ೧೦ರಲ್ಲಿ ೮ ಭಾಗ ಬೆಟ್ಟಗಳು, ಇನ್ನೊಂದು ಭಾಗ ನೀರು, ಉಳಿದ ೧ ಭಾಗವು ರೈತನ ಪಾಲು. ಇದರಿಂದ ಎಲ್ಲೆಲ್ಲಿ ಸಾಧ್ಯವೋ ಅಲ್ಲಲ್ಲಿ ಬೆಟ್ಟಗಳ ಮೇಲೆಯೂ ಬೆಳೆ ಬೆಳೆಯಲು ರೈತ ಪ್ರಯತ್ನಿಸಿ ಸಫಲನಾಗಿದ್ದಾನೆ. ವ್ಯವಸಾಯವೇ ಜೀವನದ ಮುಖ್ಯ ಆಧಾರ. ಅದರಿಂದ ಸ್ವಪರಿಪೂರ್ಣ ಹಳ್ಳಿಗಳೇ ಚೀನದ ಸಂಸ್ಕೃತಿಯ ಬೆನ್ನೆಲುಬು ಎನ್ನಬಹುದು. ಹಳ್ಳಿಗಳಲ್ಲಿ ಸಂಸಾರಗಳು ಅವಿಭಕ್ತವಾಗಿದ್ದುವು. ಅವರೆಲ್ಲರೂ ಸೇರಿ ಹಳ್ಳಿಗೊಬ್ಬ ಹಿರಿಯನನ್ನು ಗೊತ್ತುಮಾಡುತ್ತಿದ್ದರು. ಅಕ್ಕಪಕ್ಕದ ಹಳ್ಳಿಗಳೊಂದಿಗೆ ಸುಗಮ ಸಂಪರ್ಕವನ್ನಿಟ್ಟುಕೊಳ್ಳುವುದೂ, ಹಳ್ಳಿಯ ಎಲ್ಲರ ಮೇಲ್ವಿಚಾರಕನಾಗಿರುವುದೂ ಆತನ ಕೆಲಸವಾಗಿತ್ತು. ಇದೊಂದು ಬಹಳ ಸುಖ ಮತ್ತು ತೃಪ್ತಿಗಳಿಂದ ಕೂಡಿದ ಜನತೆಯ ಚಿತ್ರವಾಗಿ ನಮಗೆ ತೋರುತ್ತದೆ. ಆದರೆ ಒಂದಲ್ಲ ಒಂದು ವಿಧದಲ್ಲಿ ರೈತರ ಸುಲಿಗೆ ನಡೆದೇ ಇತ್ತು. ದೊಡ್ಡ ದೊಡ್ಡ ಊರುಗಳಲ್ಲಿ ನಗರಗಳಲ್ಲಿ ನಾಯಕರು [War-lords] ಹಳ್ಳಿಯ ರೈತರ ಹಣದಿಂದ ಭೋಗ ನಡೆಸುತ್ತಿದ್ದರು. ಇವರು ಆಗಾಗ ತಮ್ಮ ಪರಿವಾರದೊಂದಿಗೆ ಹಳ್ಳಿಗಳಿಗೆ ನುಗ್ಗಿ ಅವರಲ್ಲಿದ್ದುದನ್ನೆಲ್ಲಾ ದೋಚಿ

ಕೊಂಡು ಹೋಗಿಬಿಡುತ್ತಿದ್ದರು. ಇವರ ಪೀಳಿಗೆ ೨೦ನೆಯ ಶತಮಾನದಲ್ಲಿ ಕೂಡ ಇತ್ತೆಂದರೆ ಆಶ್ಚರ್ಯವೆನಿಸಬಹುದು. ಜೊತೆಗೆ ಆಗಾಗ ಬರುತ್ತಿದ್ದ ಕ್ಷಾಮಕ್ಕೆ ರೈತ ಬಲಿಬೀಳುತ್ತಿದ್ದ. ಅದಿಲ್ಲದಿದ್ದರೆ ನದಿಯ ನೀರು ಹೆಚ್ಚಿ ಪ್ರವಾಹದಲ್ಲಿ ಸಿಕ್ಕಿ ಪೈರುಪಚ್ಚೆ ಮನೆ ಎಲ್ಲವೂ ನೀರಿನ ಪಾಲಾಗುತ್ತಿದ್ದುವು. ಅಂತೂ ಚೀನದ ಬೆನ್ನುಮೂಳೆಯಾದ ರೈತ ಸಾವಿರಾರು ವರ್ಷಗಳಿಂದ ಸುಲಿಗೆಗೆ ಗುರಿಯಾಗುತ್ತಾ ದಿನೇ ದಿನೇ ಕ್ಷೀಣಿಸುತ್ತಾ ಬಾಳುವೆ ನಡೆಸಿದ್ದಾನೆ.

ಚೀನದ ಸಂಸ್ಕೃತಿ ಬಹಳ ಪುರಾತನವಾದುದು. ಆ ಸಂಸ್ಕೃತಿಯನ್ನು ಕಟ್ಟಿದವರು ಅಲ್ಲಿಯ ದಲಿತ ರೈತರು. ಅದೂ ಬಹಳ ಹಿಂದೆ—ಅವರೆಲ್ಲರೂ ತಮ್ಮ ತಮ್ಮ ಹಳ್ಳಿಗಳಲ್ಲಿ ತಮ್ಮಿಂದ ಆರಿಸಲ್ಪಟ್ಟ ಹಿರಿಯರ ಆಳ್ವಿಕೆಯಲ್ಲಿ ಸುಖವಾಗಿದ್ದಾಗ ಕಟ್ಟಿದ ಕಲೆಯು, ಸಂಸ್ಕೃತಿಯ ಗುಡಿ ಇನ್ನೂ ಅಳಿಯದೆ ಉಳಿದಿದೆ. ಚೀನದ ಪಿಂಗಾಣಿ ಸಾಮಾನುಗಳು, ಚಿತ್ರಗಳು, ಜಗತ್ಪ್ರಸಿದ್ಧವಾಗಿವೆ. ಈ ಸಂಸ್ಕೃತಿ ಬಹಳ ವಿಚಿತ್ರವಾದುದೂ ಹೌದು. ನೂರಾರು ಬಾರಿ ಉತ್ತರದಿಂದ ದಂಡೆತ್ತಿ ಬಂದ ವಿದೇಶೀಯರನ್ನು ಕೂಡ ತನ್ನಲ್ಲಿ ಕೂಡಿಸಿ ಅರಗಿಸಿಕೊಂಡಿದೆ. ಈ ಸಂಸ್ಕೃತಿಯು, ನಾಗರಿಕತೆಯ ಫಲವಾಗಿ ಜಗತ್ತಿನಲ್ಲೆಲ್ಲಾ ಅತಿ ಆಶ್ಚರ್ಯಕಾರಕವಾದ 'ಚೀನದ ದೊಡ್ಡ ಗೋಡೆ'—೧೫೦೦ ಮೈಲಿಗಳ ವರೆಗೆ ನಿರಂತರವಾಗಿ ಕಟ್ಟಲ್ಪಟ್ಟುದು. ಬೇಕಾದಷ್ಟು, ನೂರಾರು ಮೈಲಿಗಳಷ್ಟು ಕಾಲುವೆಗಳು ಕಟ್ಟಲ್ಪಟ್ಟುವು. ಎಲ್ಲಕ್ಕೂ ಬೆನ್ನುಮೂಳೆಯಾಗಿದ್ದವರು ಚೀನೀ ರೈತರು.

೧೯ನೆಯ ಶತಮಾನದ ವರೆಗೆ ಚೀನ ಹೊರ ಜಗತ್ತಿನೊಂದಿಗೆ ಅಷ್ಟಾಗಿ ಸಂಪರ್ಕವನ್ನೇ ಇಟ್ಟುಕೊಂಡಿರಲಿಲ್ಲವೆನ್ನಬಹುದು. ಭಾರತಕ್ಕೂ ಚೀನಕ್ಕೂ ನಡುವೆ ಸಂಪರ್ಕವಿತ್ತು. ಬುದ್ಧನ ಹುಟ್ಟುನಾಡೆಂದು ಭಾರತಕ್ಕೆ ಆಗಾಗೆ ಕೆಲವರು ಯಾತ್ರೆ ಬರುತ್ತಿದ್ದರು. "ಚೀನಾಂಬರ" ಭಾರತದಲ್ಲಿ ಬಹಳ ಪ್ರಸಿದ್ಧವಾಗಿತ್ತು. ಚೀನ ಭಾರತಗಳೆರಡೂ ಅಕ್ಕತಂಗಿಯರಂತಿದ್ದುವು. ಆದರೆ ಪಾಶ್ಚಿಮಾತ್ಯ ರಾಷ್ಟ್ರಗಳೊಂದಿಗೆ ಚೀನಕ್ಕೆ ಯಾವ ಸಂಪರ್ಕವೂ ಇರಲಿಲ್ಲ.

ವ್ಯಾಪಾರ ಮತ್ತು ಲಾಭವೇ ಮುಖ್ಯ ಧ್ಯೇಯವಾಗಿದ್ದ ಪಾಶ್ಚಿಮಾತ್ಯ ರಾಷ್ಟ್ರಗಳಿಗೆ ತಮ್ಮ ಸರಕುಗಳನ್ನು ಕೊಳ್ಳುವ ಜನ ಬೇಕಾಗಿತ್ತು. ಅದ

ಕ್ಕಾಗಿ ಹೊಸ ಹೊಸ ಪ್ರದೇಶಗಳನ್ನು ಹುಡುಕುತ್ತ ಬಂದರು. ಭಾರತ ಮೊದಲು ಅವರ ಬಲೆಗೆ ಬಿದ್ದಿತು. ಬೆಳೆಯುತ್ತಿದ್ದ ಕೈಗಾರಿಕಾ ಯುಗದ ಲಕ್ಷಣವೆಂದರೆ ಉಳಿದ ದೇಶಗಳಿಗೆ ವಲಸೆ ಹೋಗಿ ಅಲ್ಲಿ ತಮ್ಮ ಸಾಮಗ್ರಿಗಳಿಗೆ ವ್ಯಾಪಾರದ ಕಟ್ಟೆಯನ್ನು ಸ್ಥಾಪಿಸಿಕೊಳ್ಳುವುದು. ಅದೇ ರೀತಿಯಲ್ಲಿ ಭಾರತಕ್ಕೆ ವಿದೇಶೀಯರು ಬಂದುದು. ಹಾಗೆಯೇ ಚೀನಕ್ಕೂ ಕೂಡ. ೧೭೯೩ರಲ್ಲಿ ಚೀನದ ಚಕ್ರವರ್ತಿಗೆ ಇಂಗ್ಲೆಂಡಿನ ರಾಜನಿಂದ ಒಂದು ನಿಯೋಗ ಬಂದಿತು. ಎರಡು ರಾಜ್ಯಗಳಿಗೂ ವಾಣಿಜ್ಯ ಬಾಂಧವ್ಯವನ್ನು ಇಟ್ಟುಕೊಳ್ಳಲು ಇಂಗ್ಲೆಂಡಿನ ರಾಜನಿಂದ ಕೇಳಿಕೆ ಬಂದಿತ್ತು. ಆದರೆ ಚೀನದ ಚಕ್ರವರ್ತಿ ಅದನ್ನು ಒಪ್ಪಲಿಲ್ಲ. "ನಮ್ಮ ಸಾಮ್ರಾಜ್ಯ ಎಲ್ಲವನ್ನೂ ಹೇರಳವಾಗಿ ಹೊಂದಿದೆ. ಆದುದರಿಂದ ಪರದೇಶೀ ಅನಾಗರಿಕರಿಂದ ನಾವು ಯಾವುದನ್ನೂ ಆಮದು ಮಾಡಿಕೊಳ್ಳಬೇಕಾಗಿಲ್ಲ" ಎಂದು ಉತ್ತರ ಕೊಟ್ಟನು. ಆದರೆ ದಕ್ಷಿಣ ಚೀನದ ಕೆಲವು ವ್ಯಾಪಾರಗಾರರು ಕ್ಯಾಂಟನ್ ಬಂದರೊಂದನ್ನು ವ್ಯಾಪಾರಕ್ಕೆ ತೆರೆಯಬೇಕೆಂದು ಕೇಳಿಕೊಂಡುದರ ಮೇಲೆ ಅಲ್ಲಿ ಯೂರೋಪಿಯನ್ನರಿಗೆ ವ್ಯಾಪಾರ ನಡೆಸಲು ಅನುಮತಿ ದೊರಕಿತು. ಇದೇ ಮುಂದೆ ಚೀನದ ನಡುವೆ ಅಸಾಧ್ಯ ಅನೈಕ್ಯವನ್ನು ತಂದೊಡ್ಡಲು ಹಿರಿಯ ಸಾಧನವಾಯಿತು.

ಚೀನದಲ್ಲಿ ಬ್ರಿಟಿಷರ ವ್ಯಾಪಾರಕ್ಕೆ ಹೆಚ್ಚು ಆಸ್ಪದವಿರಲಿಲ್ಲ. ಬ್ರಿಟಿಷರ ಸಾಮಾನುಗಳು ಯಾವುವೂ ಚೀನರಿಗೆ ಬೇಕಿರಲಿಲ್ಲ. ಆದರೆ ವಿದೇಶೀಯರಿಗೆ ಮಾತ್ರ ಚೀನದ ಟೀ ಮತ್ತು ರೇಶ್ಮೆಗಳಿಗಾಗಿ ಬೆಳ್ಳಿ ಬೇಕಾಗಿತ್ತು. ಆದುದರಿಂದ ಈ ಪಾಶ್ಚಿಮಾತ್ಯರಿಗೆ ಉಳಿದ ದಾರಿ ಒಂದೇ. ಅದು ಚೀನಕ್ಕೆ ಅಫೀಮನ್ನು ಒದಗಿಸುವುದು. ಚೀನದ ಚಕ್ರವರ್ತಿಗೆ ಈ ಅಫೀಮಿನ ಮಾರಾಟದ ಸುಳಿವು ಹತ್ತಿದೊಡನೆಯೇ ಕ್ಯಾಂಟನ್ ನಗರಕ್ಕೆ ತನ್ನ ಪ್ರತಿನಿಧಿಯಾದ ಕಮಿಷನರ್ ಲಿನ್ [Lin] ನನ್ನು ಪೀಕಿಂಗಿನಿಂದ ಕಳುಹಿಸಿದ. ಲಿನ್ ಬಂದು ಅಫೀಮು ಮಾರಾಟವನ್ನು ತಡೆಗಟ್ಟಲು ಪ್ರಯತ್ನಿಸಿದನು. ಇನ್ನು ಮೇಲೆ ಅಫೀಮನ್ನು ಚೀನಕ್ಕೆ ತರಕೂಡದೆಂದು ಪಾಶ್ಚಿಮಾತ್ಯರಿಗೆ ಎಚ್ಚರಿಕೆ ಕೊಟ್ಟನು. ಆದರೆ ಅವರು ಆ ಎಚ್ಚರಿಕೆಯನ್ನು ಗಮನಿಸಲೇ ಇಲ್ಲ. ೧೮೩೯ರಲ್ಲಿ ಚೀನರಿಗೂ ಬ್ರಿಟಿಷರಿಗೂ ಘರ್ಷಣೆಯಾರಂಭವಾಯಿತು.

ಸಹಜವಾಗಿಯೇ ಚೀನರು ಪ್ರತಿಯೊಂದು ಕಾದಾಟದಲ್ಲೂ ಸೋತರು. ಪರಿಣಾಮವಾಗಿ ೧೮೪೨ರಲ್ಲಿ ನಾನ್‌ಕಿಂಗ್ ಒಪ್ಪಂದವಾಯಿತು.

ನಾನ್‌ಕಿಂಗ್ ಒಪ್ಪಂದ ಚೀನದ ಅವಮಾನ ಮತ್ತು ಅವನತಿಗಳ ಸಾಕ್ಷಿಯಾಗಿದೆ. ಅದರಂತೆ ಬ್ರಿಟಿಷರಿಗೆ ಹಾಂಗ್‌ಕಾಂಗ್ ಬಿಟ್ಟುಕೊಟ್ಟುದೂ ಅಲ್ಲದೆ, ಅವರಿಗೆ ವ್ಯಾಪಾರಕ್ಕಾಗಿ, ಕ್ಯಾಂಟನ್, ಅಮೈ, ಫೂಚೌ, ನಿಂಗ್ಪೊ ಮತ್ತು ಶಾಂಗ್ಹೈ ಪಟ್ಟಣಗಳನ್ನು ತೆರೆಯಲಾಯಿತು. ೧೮೪೩ರಲ್ಲಿ ಮತ್ತೊಂದು ಒಪ್ಪಂದವಾಗಿ ಬ್ರಿಟಿಷರಿಗೆ "ವಿಶೇಷ ಸೌಕರ್ಯ"ಗಳನ್ನು ಕೊಡುವ ತೀರ್ಮಾನವೂ ಆಯಿತು. ಚೀನದ ಈ ದೌರ್ಬಲ್ಯವನ್ನು ತಿಳಿದು ಅದನ್ನು ತಮ್ಮ ಏಳಿಗೆಗಾಗಿ ಉಪಯೋಗಿಸಿಕೊಳ್ಳಲು ಉಳಿದ ಪಾಶ್ಚಿಮಾತ್ಯರೂ ಮುನ್ನಡೆದರು. ಬ್ರಿಟಿಷರ ಹಿಂದೆಯೇ ಫ್ರೆಂಚರೂ, ಬೆಲ್ಜಿಯನ್ನರೂ, ಸ್ವೀಡನ್ನಿನವರೂ ಚೀನರಿಂದ ಇದೇ ರೀತಿಯ ಒಪ್ಪಂದಗಳನ್ನು ಕಸಿದುಕೊಂಡರು. ಅಮೆರಿಕನರೂ ಹಿಂದೆ ಬೀಳದೆ ತಮಗೂ ಬ್ರಿಟಿಷರಿಗೆ ಕೊಟ್ಟ 'ವಿಶೇಷ ಸೌಕರ್ಯ'ಗಳನ್ನು ಕೊಡುವಂತೆ ಚೀನವನ್ನು ಒತ್ತಾಯಪಡಿಸಿದರು.

ಇದರಿಂದ ಚೀನರಿಗಾಗಲೀ ಪರದೇಶೀಯರಿಗಾಗಲೀ ಸುಖವಾಗಲಿಲ್ಲ. ಇಬ್ಬರಿಗೂ ಆಗಾಗ ಘರ್ಷಣೆಗಳಾಗುತ್ತಲೇ ಇದ್ದುವು. ಚೀನರ ಮೇಲೆ ಇಲ್ಲದ ಸಲ್ಲದ ಆರೋಪಗಳು ಬರುತ್ತಿದ್ದುವು. ಅದಕ್ಕಾಗಿ ಚೀನರು ಪ್ರತಿಭಟಿಸಿದರೆ ಕತ್ತಿಯ ತುದಿ ತೋರಿಸಿ ಅವರ ತಲೆ ಬಗ್ಗಿಸುತ್ತಿದ್ದರು. ೧೮೫೬ರಲ್ಲಿ ಇಂತಹ ಒಂದು ಘಟನೆ ನಡೆಯಿತು. ಚೀನರು ಬ್ರಿಟಿಷ್ ಬಾವುಟಕ್ಕೆ "Arrow" ಹಡಗಿನ ಮೇಲೆ ಅವಮಾನ ತೋರಿದರಂತೆ. ಅದಕ್ಕಾಗಿ ಬ್ರಿಟಿಷರೂ ಫ್ರೆಂಚರೂ ಸೇರಿಕೊಂಡು ಚೀನೀ ಚಕ್ರವರ್ತಿಯ ರಾಜಧಾನಿಯಾದ ಪೀಕಿಂಗಿನ ಮೇಲೆ ದಂಡೆತ್ತಿದರು. ಪೀಕಿಂಗಿನ ಪತನವಾಗಿ ಹೋಗುತ್ತಿತ್ತು. ಆಗ ಚೀನದ ಚಕ್ರವರ್ತಿ ವಿಧಿಯಿಲ್ಲದೆ ವಿದೇಶೀಯರ ಒಪ್ಪಂದಗಳಿಗೆ ಕರಾರುಗಳಿಗೆ ಸಹಿ ಹಾಕಬೇಕಾಯಿತು.

೧೮೫೮ರ ಟಿಯಂಟ್ಸಿನ್ ಒಪ್ಪಂದದಂತೆ ಅಫೀಮು ವ್ಯಾಪಾರವು ನ್ಯಾಯಸಮ್ಮತವಾಯಿತು. ಇದರಿಂದ ಚೀನದ ಅವನತಿಯು ಆರಂಭವಾಯಿತೆನ್ನಬಹುದು. ಮತ್ತೆ ೧೮೬೦ರಲ್ಲಿ ಘರ್ಷಣೆಯಾಗಿ ಹಾಂಗ್‌ಕಾಂಗಿನ ಎದುರಿನ ಪುಟ್ಟ ಪ್ರಾಂತ್ಯವೂ ಬ್ರಿಟಿಷರ ಪಾಲಾಯಿತು. ಇದರೊಂದಿಗೇ ಬ್ರಿಟಿಷರಿಗೂ

ಳುಳಿದ ವಿದೇಶೀಯರಿಗೂ ಕೆಲವು ವಿಶೇಷ ಹಕ್ಕುಗಳು ಕೊಡಲ್ಪಟ್ಟುವು. ಅವರು ಚೀನೀ ನ್ಯಾಯಾಸ್ಥಾನಕ್ಕೆ ಬದ್ಧರಲ್ಲವೆಂಬುದೂ ಸ್ಥಿರವಾಯಿತು. ಅವರಿಗೆ "ವಿಶೇಷ ಪ್ರದೇಶ" ಬಿಡಲ್ಪಟ್ಟಿತು. ಆ ಪ್ರದೇಶಗಳಲ್ಲಿ ವಿದೇಶೀಯರು ತಮ್ಮ ಸರ್ಕಾರ ಸ್ಥಾಪಿಸಿಕೊಂಡು ಆಳುತ್ತಿದ್ದರು. ಇದರಿಂದ ಚೀನದ ಅಧಿಕಾರಬಲ ಎಷ್ಟು ಹೀನ ಸ್ಥಿತಿಗಿಳಿಯಿತೆಂಬುದನ್ನು ಊಹಿಸಬಹುದು. ಚೀನದಲ್ಲಿ ಚಕ್ರವರ್ತಿಯ ಪ್ರಭುತ್ವ ಕುಗ್ಗಿ ಅಲ್ಲಲ್ಲಿಯೇ ಪಾಳೆಯಗಾರರು ಹುಟ್ಟಿಕೊಂಡರು. ಅವರೆಲ್ಲರೂ ತಮ್ಮಿಷ್ಟಕ್ಕೆ ತಾವು ಸ್ವತಂತ್ರರಾಗಿದ್ದರು. ಬ್ರಿಟಿಷರೂ, ಉಳಿದ ವಿದೇಶೀಯರೂ ಚೀನದಲ್ಲಿ ತಮ್ಮ ತಮ್ಮ ಪ್ರಭುತ್ವ ಸ್ಥಾಪಿಸಿಕೊಳ್ಳುವಂತಾಯಿತು. ಅವರೇ ಚೀನದ ತೆರಿಗೆಯನ್ನು ಕೂಡ ತೆಗೆದುಕೊಳ್ಳುತ್ತಿದ್ದರು.

ಈ ಅಫೀಮಿನ ಯುದ್ಧದ ನಂತರ ಸಾಮಾಜಿಕ ಅತೃಪ್ತಿ ಎಲ್ಲೆಲ್ಲಿಯೂ ಕಾಣಿಸಿಕೊಳ್ಳಲಾರಂಭಿಸಿತು. ಮಂಚು ಮನೆತನದವರನ್ನು ಚೀನೀಯರು ಮನಸಾರ ದ್ವೇಷಿಸುತ್ತಿದ್ದರು. ಬ್ರಿಟಿಷರು ಮತ್ತು ಇತರ ವಿದೇಶೀಯರಿಂದ ಚೀನಕ್ಕೆ ಒದಗಿದ ಅಪಮಾನದಿಂದ ಎಲ್ಲೆಲ್ಲಿಯೂ ಅನಾಯಕತೆ ಕೂಡ ಉಂಟಾಯಿತು. ಇದರ ಫಲವಾಗಿ ನಿರಾಸೆ, ಅಸಮಾಧಾನಗಳು ದಂಗೆಯ ರೂಪದಲ್ಲಿ ಹೊರತೋರಿತು.

೧೮೬೪-೬೫ರ ಟೇಪಿಂಗ್ ದಂಗೆಯು ಚೀನದಲ್ಲಿ ವಿದೇಶೀ ರಾಜ್ಯಗಳ ನಿಜವಾದ ನೀತಿಯನ್ನು ಬಯಲಿಗೆಳೆಯಿತು. ಈ ದಂಗೆ ಮೊದಲು ದಕ್ಷಿಣ ಚೀನದಲ್ಲಿ ಆರಂಭವಾಗಿ ದೇಶದ ಎಲ್ಲಾ ಕಡೆಗಳಲ್ಲೂ ಹರಡಿಕೊಂಡಿತು. ಇದರ ನಾಯಕರು ಒಂದು ವಿಚಿತ್ರ ರೀತಿಯ ಆರ್ಥಿಕ ಸುಧಾರಣೆಯನ್ನನುಸರಿಸಿದರು. ಮೊದಲು ಮೊದಲು ಇದು ತಮಗೆ ಉಪಯೋಗವಾಗುವುದೆಂದುಕೊಂಡಿದ್ದ ವಿದೇಶೀಯರು ಈ ದಂಗೆಕಾರರಿಗೆ ಸಹಾಯ ನೀಡಿದರು. ಮಂಚು ಚಕ್ರವರ್ತಿಯಿಂದ ಒಂದು ಹೊಸ ಒಪ್ಪಂದ ಮಾಡಿಕೊಳ್ಳಲು ಇದನ್ನು ಉಪಯೋಗಿಸಿಕೊಂಡರು. ಒಪ್ಪಂದವಾದೊಡನೆಯೇ ತಾವೇ ಎತ್ತಿಕಟ್ಟಿದ ದಂಗೆಕಾರರನ್ನು ತಮ್ಮ ಶಸ್ತ್ರಾಸ್ತ್ರಗಳಿಂದಲೇ ಕೊಲೆಮಾಡಲಾರಂಭಿಸಿದರು. ಲಕ್ಷಾಂತರ ಮಂದಿ ಚೀನರು ಇವರ ಕಾಪಟ್ಯಕ್ಕೆ ಮೋಸಹೋಗಿ ಕೊಲೆಯಾದರು. ಇದು ಚೀನದ ಪ್ರಭುತ್ವದ ದೌರ್ಬಲ್ಯವನ್ನು ಮಾತ್ರವೇ

ಅಲ್ಲದೆ, ವಿದೇಶೀ ಸಾಮ್ರಾಜ್ಯಶಾಹಿಗಳ ಏಳಿಗೆಯನ್ನೂ ಸೂಚಿಸುತ್ತದೆ.

ಚೀನ ದಿನೇ ದಿನೇ ದಾಸ್ಯಕೂಪದ ದಾರಿಯಲ್ಲಿ ಉರುಳುತ್ತಿತ್ತು. ೧೯ನೆಯ ಶತಮಾನದ ಅಂತ್ಯದ ವೇಳೆಗಾಗಲೇ ಜಪಾನ್ ಆರೆಪಾಳೆಯಗಾರಿಕೆ ಪದ್ಧತಿಯ ಮೇಲೆಯೇ ಕೈಗಾರಿಕೆಯನ್ನು ಕಟ್ಟಿತ್ತು. ಆಧುನಿಕ ಪಾಶ್ಚಿಮಾತ್ಯ ಪದ್ಧತಿಗಳನ್ನು ಅವಲಂಬಿಸಿ ಪ್ರಬಲವಾಗಿತ್ತು. ಕೈಗಾರಿಕೆ ಹೆಚ್ಚಿ ಸಾಮಗ್ರಿಗಳನ್ನು ವ್ಯಾಪಾರಕ್ಕೆ ಕಳುಹಲು ಅದಕ್ಕೂ ಅಧೀನ ರಾಜ್ಯಗಳ ಮಾರುಕಟ್ಟೆ ಬೇಕಾಗಿತ್ತು. ಪಾಶ್ಚಿಮಾತ್ಯ ರಾಷ್ಟ್ರಗಳು ವ್ಯಾಪಾರಕ್ಕಾಗಿ ಸಾಮ್ರಾಜ್ಯವನ್ನು ಬೆಳೆಸುವ ಹಾದಿ ತುಳಿದಂತೆ ಜಪಾನೂ ಸಾಮ್ರಾಜ್ಯ ಕಟ್ಟುವ ಹಾದಿ ಹುಡುಕುತ್ತಿತ್ತು. ಜಪಾನಿಗೆ ಸುಲಭವಾಗಿ ಸಿಕ್ಕಿದ ಬೇಟೆ ಚೀನಾ. ತೋಳ ಹಳ್ಳಕ್ಕೆ ಬಿದ್ದರೆ ಆಳಿಗೊಂದು ಕಲ್ಲು ತಾನೆ? ಈಗಾಗಲೇ ಚೀನ ವಿದೇಶೀಯರ "ಒಪ್ಪಂದ"ಗಳಿಗೆ ಸಿಕ್ಕಿ ಒದ್ದಾಡುತ್ತಿತ್ತು. ಅದರೊಂದಿಗೆ ಜಪಾನಿನ ಸುಲಿಗೆಯೂ ಸೇರಿತು! ಜಪಾನು ಚೀನದ ಮೇಲೆ ನಿಷ್ಕಾರಣವಾಗಿ ೧೮೯೪-೯೫ರಲ್ಲಿ ಯುದ್ಧ ಹೂಡಿ ಫಾರ್ಮೋಸಾ ದ್ವೀಪವನ್ನು ಕಸಿದುಕೊಂಡಿತು. ಜತೆಗೆ ಕೊರಿಯಾವನ್ನು ಚೀನದಿಂದ ಬೇರ್ಪಡಿಸಿ, ಯುದ್ಧದ ಎಲ್ಲಾ ಖರ್ಚನ್ನೂ ಚೀನದ ಮೇಲೆಯೇ ಹೊರಿಸಿತು. ಅಂತೂ ಸಾಮ್ರಾಜ್ಯಶಾಹೀ ಬಂಡವಾಳಗಾರರು ಚೀನವನ್ನು ಹದ್ದುಗಳಂತೆ ಮುತ್ತಿ ಕಿತ್ತು ತಿನ್ನುತ್ತಿದ್ದರು. ಪಾಶ್ಚಿಮಾತ್ಯ ರಾಷ್ಟ್ರಗಳು ಈಗಾಗಲೇ ಚೀನವನ್ನು ಸಾಕಷ್ಟು ಹಿಂಸೆಗೆ ಗುರಿ ಮಾಡಿ ಒಂದೊಂದೇ ಪ್ರದೇಶವನ್ನು ನುಂಗುತ್ತಿದ್ದರು. ಬ್ರಿಟಿಷರು, ಚೀನಕ್ಕೂ ಭಾರತಕ್ಕೂ ನಡುವಿರುವ ಹಲಕೆಲವು ಪ್ರದೇಶಗಳನ್ನೂ, ಬರ್ಮಾವನ್ನೂ ನುಂಗಿದರು. ಫ್ರೆಂಚರು ಇಂಡೋ ಚೀನಾವನ್ನಾಕ್ರಮಿಸಿದರು. ಜಾರನ ರಷ್ಯಾ ಆಮೂರಿನ ಉತ್ತರ ಪ್ರದೇಶವನ್ನು ಚೀನದಿಂದ ಬೇರ್ಪಡಿಸಿ ಕಸಿದುಕೊಂಡಿತು. ಮತ್ತೆ ಚೀನದಿಂದ ಹಲವು ಪ್ರದೇಶಗಳನ್ನು ಕೆಲ ಹಣಕ್ಕಾಗಿ ಬ್ರಿಟಿಷರು, ಫ್ರೆಂಚರು, ಜರ್ಮನರು ಮತ್ತು ರಷ್ಯನರು 'ಗೇಣಿಗೆ ತೆಗೆದುಕೊಂಡಂತೆ'—ಒತ್ತೆ ಇಟ್ಟುಕೊಂಡರು. ಆ ಪ್ರದೇಶಗಳಲ್ಲಿನ ಕಂದಾಯವನ್ನೆಲ್ಲಾ ತಾವೇ ತೆಗೆದುಕೊಳ್ಳುತ್ತಿದ್ದರು. ಚೀನೀ ಅಧಿಕಾರಕ್ಕೊಳಪಡದಂತೆ ವಿದೇಶೀಯರು ಅಲ್ಲಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಿ, ಅಲ್ಲಿ ಚೀನೀ ಕಾರ್ಮಿಕರನ್ನು ಶೋಷಿಸಲು ಸಾಕಷ್ಟು ಅನುಕೂಲವಿತ್ತು. ಸರ್ಕಾರದ ಅಸಹಾಯ

ತಿಯು ಎಲ್ಲೆಡೆಯಲ್ಲಿಯೂ ಜನರಲ್ಲಿ ಅತೃಪ್ತಿಯನ್ನುಂಟುಮಾಡಿತ್ತು. ಇದರಿಂದಲೇ ೨೦ನೆಯ ಶತಮಾನದ ಪ್ರಾರಂಭದಲ್ಲಿ ಅವರು ದಂಗೆಯೆದ್ದುದು. ಅದನ್ನು ಬಾಕ್ಸರ್ ದಂಗೆ [Boxer Rebellion] ಎಂದು ಸಾಮಾನ್ಯವಾಗಿ ಕರೆಯುತ್ತಾರೆ. ಆ ದಂಗೆಯಲ್ಲಿ ಅನಾಯಕ ರೈತರು ತಮ್ಮ ಅತೃಪ್ತಿಯನ್ನು ಕ್ರಾಂತಿಯ ಹಾದಿಯಲ್ಲಿ ಹರಿಸದೆ, ಬರೀ ವಿದೇಶೀಯರ ದ್ವೇಷದಲ್ಲಿ ಹಾಯಿಸಿದರು. ಆದರಿಂದ ವಿದೇಶೀಯರು ರಕ್ತದ ಕೋಡಿ ಹರಿಸಿ ಅದನ್ನು ಮೆಟ್ಟಿದರು. ಆಗ ವಿದೇಶೀ ಸೈನ್ಯಗಳು ದಂಗೆಯನ್ನು ಅಡಗಿಸುವ ನೆಪದಲ್ಲಿ ಪೀಕಿಂಗಿನಲ್ಲಿದ್ದ ಅಪೋಘ ಪುಸ್ತಕ ಭಂಡಾರವನ್ನೂ, ಚಕ್ರವರ್ತಿಯ ಅರಮನೆಯನ್ನೂ ಲೂಟಿಮಾಡಿದರೂ ಸರ್ಕಾರ ಸುಮ್ಮನಿದ್ದಿತು.

೧೯೦೪-೫ರ ರಷ್ಯಾ-ಜಪಾನ್ ಯುದ್ಧ ಹೆಚ್ಚು ಭಾಗ ಚೀನದ ನೆಲದ ಮೇಲೇ ನಡೆದರೂ, ತನ್ನ ಸರಹದ್ದಿನೊಳಗಿನ ಆ ಯುದ್ಧವನ್ನು ಚೀನ ನೋಡಿ ತೆಪ್ಪಗೆ ಕೂತುಕೊಂಡಿರಬೇಕಾಯಿತು. ಈ ಯುದ್ಧದ ಫಲವಾಗಿ ಮಂಚೂರಿಯದಲ್ಲಿ ರಷ್ಯನರಿಗೆ ಬದಲು ಜಪಾನೀಯರು ಉಳಿದರು. ಚೀನಕ್ಕೆ ಆದ ಫಲ? ೧೯೧೦ರಲ್ಲಿ ಕೊರಿಯವನ್ನು ಜಪಾನ್ ಪೂರ್ಣವಾಗಿ ವಶಪಡಿಸಿಕೊಂಡಿತು. ಚೀನ ನಿಜವಾಗಿಯೂ ಆಗ ಅಫೀಮಿನ ದಾಸನಾಗಿ, ವಿದೇಶಿಗಳ ತೊತ್ತಾಗಿ, ಏಷ್ಯದ ರೋಗಿಯಾಗಿ ಉಳಿಯಿತು. ದಿನ ಕಳೆದಂತೆ ಆರ್ಥಿಕ ದಿಗ್ಬಂಧ ಹೆಚ್ಚಿ ಕುತ್ತಿಗೆಗೆ ಉರುಲು ಬೀಳುವ ಸನ್ನಿವೇಶ ಬೆಳೆಯುತ್ತಿತ್ತು.

ಆಳುವ ಸರಕಾರದ ಈ ಅಸಹಾಯತೆ ಕೆಲವು ಮಂದಿಯಲ್ಲಿ ಕ್ರಾಂತಿಕಾರೀ ಯೋಚನೆಗಳಿಗೆ ಎಡೆ ಕೊಟ್ಟಿತು. ಕ್ಯಾಂಟನ್ ನಗರ ಮತ್ತು ದಕ್ಷಿಣ ಚೀನದ ಮತ್ತೆ ಕೆಲವು ಸ್ಥಳಗಳಲ್ಲಿ ಜನರು ಈ ಆರ್ಥಿಕ ದಾಸ್ಯವನ್ನು ಹೇಗಾದರೂ ಕೊನೆಗಾಣಿಸಬೇಕೆಂದುಕೊಂಡರು. ಹಿಂದಿನಿಂದ ಬಂದಿದ್ದ ಕೆಲವು ಗುಪ್ತ ಸಂಘಗಳು ಮತ್ತೆ ಕೆಲಸ ಮಾಡಲಾರಂಭಿಸಿದವು. ೧೯೦೫ರ ರಷ್ಯದ ಕ್ರಾಂತಿ ವಿಫಲವಾದರೂ ಅದು ಏಷ್ಯದ ಜನರಿಗೆ ಒಂದು ಹೊಸ ಹುರುಪನ್ನು ತುಂಬಿ ಕೊಟ್ಟಿತ್ತು. ಎಲ್ಲೆಲ್ಲಿಯೂ ಈ ಕ್ರಾಂತಿಕಾರಿಗಳ ಕಾರ್ಯ ಜೋರಾಗಿ ಮಂಚೂ ಚಕ್ರವರ್ತಿಗಳ ವಿರುದ್ಧ ೧೯೧೧ನೇ ಅಕ್ಟೋಬರ್ ೧೦ರಂದು ಬಂಡಾಯ ಆರಂಭವಾಯಿತು. ವೂಚಾಂಗ್ ಪಟ್ಟಣದಲ್ಲಿ ಆರಂಭವಾಗಿ, ಹ್ಯಾಂಕೌ, ಹಾನ್ಯಾಂಗ್ ಮತ್ತು ಉಳಿದ ಪ್ರದೇಶಗಳಿಗೂ ಕ್ರಾಂತಿ ಬಹಳ

ಬೇಗ ಹರಡಿತು. ಈ ಕ್ರಾಂತಿಯ ನಾಯಕ ಡಾಕ್ಟರ್ ಸನ್-ಯಾತ್-ಸೇನ್. [Sun-Yat-San.]

ಚೀನದ ರಿಪಬ್ಲಿಕ್ಕಿನ ಸ್ಥಾಪನೆಯಾದ ಮೇಲೆ ಅದು ಪಾಳೇಗಾರೀ ಪದ್ಧತಿಯ ಪಂಗಡದವರ ಕೈಯಲ್ಲೇ ಉಳಿಯಿತು. ೧೯೧೧ ರ ಕ್ರಾಂತಿಯಲ್ಲಿ ಮಂಚು ಪೀಳಿಗೆಯವರ ವಿರುದ್ಧ ಹೋರಾಡಲು ಡಾಕ್ಟರ್ ಸನ್ ಯಾತ್ ಸೇನ್ ಮತ್ತು ಅವನ ಪ್ರಗತಿಗಾಮಿಗಳೊಂದಿಗೆ, ಚಕ್ರವರ್ತಿಯ ಮೇಲೆ ಅಸಮಾಧಾನಗೊಂಡಿದ್ದ ಪಾಳೆಯಗಾರರೂ, ಜಮೀನುದಾರರೂ ಸೇರಿ ಕೊಂಡಿದ್ದರು. ಪೀಕಿಂಗಿನಲ್ಲಿ ಅವರಲ್ಲಿ ಒಬ್ಬನಾದ ಯುನ್-ಷಿಕೈ ಎಂಬು ವನ ಕೈಕೆಳಗೆ ಆಡಳಿತ ಜರುಗಲಾರಂಭಿಸಿತು.

ಜಗತ್ತಿನ ಮೊದಲಿನ ಮಹಾ ಯುದ್ಧದ ಕಾಲದಲ್ಲಿ ದೊರೆತ ಅವಕಾಶ ವನ್ನು ಜಪಾನ್ ತನ್ನ ಸ್ವಂತ ಅಧಿಕಾರ ಹೆಚ್ಚಿಸಿಕೊಳ್ಳಲು ಉಪಯೋಗಿಸಿ ಕೊಂಡಿತು. ೧೯೧೫ ನೆಯ ಜನವರಿ ೧೮ ರಂದು ಚೀನಕ್ಕೆ ೨೧ ಕೇಳಿಕೆ ಗಳನ್ನು ಜಪಾನ್ ಕೊಟ್ಟಿತು. ಇದರಂತೆ ಚೀನದಲ್ಲಿದ್ದ ಜರ್ಮನ್ ವಸಾಹತುಗಳನ್ನೂ, ಜರ್ಮನ್ ಬಂಡವಾಲ ಮುಂತಾದುವನ್ನೂ ಜಪಾನಿಗೆ ಬಿಟ್ಟು ಕೊಡಬೇಕು; ಮಂಚೂರಿಯ ಮತ್ತು ಮಂಗೋಲಿಯಗಳನ್ನಾಕ್ರಮಿಸಲು ಜಪಾನಿಗೆ ಸಹಾಯ ನೀಡಬೇಕು; ಚೀನದ ಬಂದರುಗಳನ್ನು ಜಪಾನಿಗೆ ಮಾತ್ರ ತೆರೆಯಬೇಕು; ಸೈನ್ಯ, ಪೋಲೀಸ್ ಮತ್ತು ಆರ್ಥಿಕ ಇಲಾಖೆಗಳಲ್ಲಿ ಜಪಾನೀ ಸಲಹೆಗಾರರು—ಎಂದರೆ ಮೇಲ್ವಿಚಾರಕರನ್ನು ಇಟ್ಟುಕೊಳ್ಳಬೇಕು; ಚೀನದ ಕಲ್ಲಿದ್ದಲು, ಕಬ್ಬಿಣ ಮತ್ತು ರೈಲ್ವೆಗಳು ಜಪಾನಿನ ಆಡಳಿತದಲ್ಲಿರ ಬೇಕು; ಇವೇ ರೀತಿಯಾದ ೨೧ ಕೇಳಿಕೆಗಳನ್ನು ಜಪಾನ್ ಚೀನದ ಮುಂದಿಟ್ಟಿತು. ಪೀಕಿಂಗಿನಲ್ಲಿದ್ದ ಅಧಿಕಾರಿಗಳು ಲಂಚ ತೆಗೆದುಕೊಂಡು ಜಪಾನಿನ ಈ ಎಲ್ಲ ಕೇಳಿಕೆಗಳನ್ನೂ ಒಪ್ಪಿಬಿಟ್ಟರು. ಚೀನದ ಆಡಳಿತ ಪರಿಸ್ಥಿತಿ ಅಷ್ಟು ಹೀನವಾಗಿತ್ತು! ನಾಲ್ಕು ಮಂದಿ ತಮ್ಮ ಹಣದ ಚೀಲ ತುಂಬಿಕೊಳ್ಳುವುದಕ್ಕಾಗಿ ನಲ್ವತ್ತು ಕೋಟಿಯ ಕುತ್ತಿಗೆಗೆ ಉರುಲು ಹಾಕಿದರು.

ಆದರೆ ಪರಿಸ್ಥಿತಿ ಹೀಗೆಯೇ ಇರಲು ಸಾಧ್ಯವಿರಲಿಲ್ಲ. ೧೯೧೭ ರ ರಷ್ಯದ ಕ್ರಾಂತಿ ಎಲ್ಲಾ ಕಡೆಯೂ ಸ್ವಾತಂತ್ರ್ಯದ ಓಕುಳಿ ಎರಚಿತು. ಎಲ್ಲ ದಲಿತ ರಾಷ್ಟ್ರಗಳಿಗೂ ರಷ್ಯನ್ ಕ್ರಾಂತಿಯಾದೊಡನೆ ಸ್ವಾತಂತ್ರ್ಯದ ಉದಯ

ಸನ್ನಿಹಿತವಾಯಿತೆಂದುಕೊಂಡರು. ಎಲ್ಲೆಲ್ಲಿಯೂ ವಿದ್ಯಾರ್ಥಿಗಳೂ, ಕಲಿತವರೂ ತಮ್ಮ ಮುಕ್ತಿಯ ದಾರಿ ಚಿಂತಿಸಲಾರಂಭಿಸಿದರು. ರಷ್ಯದ ಕ್ರಾಂತಿಯ ಸಾಫಲ್ಯದಿಂದ ಎಲ್ಲರಲ್ಲಿಯೂ ಹೊಸ ಹುರುಪು ಚೈತನ್ಯ ಕೂಡಿ ಬಂದಿತು. ಚೀನದಲ್ಲಿ ಕೂಡ ವಿದ್ಯಾರ್ಥಿಗಳಿಗೂ, ಕೆಲವು ಮಂದಿ ವಿಚಾರಶೀಲ ಮಧ್ಯಮ ವರ್ಗದವರಿಗೂ ಇದರಿಂದ ಹೊಸ ಹುರುಪು ಬಂದಿತು. ವರ್ಸೇಲ್ಸ್ ಒಪ್ಪಂದದ ಕಾಲದಲ್ಲಿ ಅಮೆರಿಕನ್ ಮಿತವಾದವೂ, ಬ್ರಿಟಿಷ್ ಸಾಮ್ರಾಜ್ಯವಾದವೂ ತಮಗೆ ಸಹಾಯಮಾಡಬಹುದೆಂದು ಚೀನರು ನಂಬಿದ್ದರು. ಆದರೆ ಜಪಾನಿನ ಇಪ್ಪತ್ತೊಂದು ಕೇಳಿಕೆಗಳನ್ನು ಚೀನ ಒಪ್ಪಬೇಕೆಂದೂ, ಜಪಾನ್ ಷಾಂಟುಂಗ್ ಪ್ರಾಂತ್ಯ ಹಿಡಿದುದು ಸರಿಯೆಂದೂ ವರ್ಸೇಲ್ಸಿನಲ್ಲಿ ತೀರ್ಮಾನವಾಗಿ ಹೋಯಿತು. ಇದರಿಂದ ಚೀನಕ್ಕೆ ಅಮೆರಿಕ, ಬ್ರಿಟನ್‌ಗಳಲ್ಲಿದ್ದ ಭರವಸೆ ನುಚ್ಚುನೂರಾಗಿ ಹೋಯಿತು. ಇದುವರೆಗೂ ಬ್ರಿಟಿಷ್, ಅಮೆರಿಕನ್, ಫ್ರೆಂಚ್ ಮತ್ತು ಜಪಾನೀ ಬಂಡವಾಳಗಾರರ ಶೋಷಣೆಗೆ ಗುರಿಯಾಗಿದ್ದ ಚೀನ ಕೊನೆಗೆ ಎಚ್ಚರಗೊಂಡಿತು. ಜಪಾನೀ ಶೋಷಕರ ಬಾಯಿಗೆ ಕೊರಿಯ, ಫಾರ್ಮೋಸಾ ಮತ್ತಿನ್ನು ಕೆಲವು ಪ್ರದೇಶಗಳನ್ನೂ, ಬ್ರಿಟಿಷರಿಗೆ ಹಾಂಗ್‌ಕಾಂಗ್, ಬರ್ಮವನ್ನೂ ಫ್ರೆಂಚರಿಗೆ ಇಂಡೋ ಚೀನವನ್ನೂ ಬಿಟ್ಟುಕೊಟ್ಟು, ಚೀನ ಬರಿಗೈಯಾಗಿತ್ತು. ಕೊನೆಗೆ ತಡೆಯಲಾಗದೆ ದೀರ್ಘ ನಿದ್ರೆಯಿಂದ ಎಚ್ಚರಗೊಂಡಿತು. ಈ ಜನಜಾಗೃತಿಯ ಮೊದಲನೆಯ ನಿದರ್ಶನ ೧೯೧೯ ನೆಯ ಮೇ ೪ರ ವಿದ್ಯಾರ್ಥಿಗಳ ವಿರೋಧ ಪ್ರದರ್ಶನ. ಚೀನೀಯರೆಲ್ಲರೂ ಆ ದಿನವನ್ನು ಕ್ರಾಂತಿಯ ಮೊದಲ ದಿನವೆಂದು ಭಾವಿಸುತ್ತಾರೆ. ಜಪಾನೀ ವಿರುದ್ಧ ಚಳುವಳಿ ಆರಂಭವಾಯಿತು. ಜಪಾನೀ ವಸ್ತುಗಳಿಗೆ ಬಹಿಷ್ಕಾರ ಹಾಕಿದರು. ವಿದ್ಯಾರ್ಥಿಗಳು ಪೀಕಿಂಗಿನಲ್ಲಿ ಪ್ರಚಂಡ ಮೆರವಣಿಗೆಗಳನ್ನು ನಡೆಸಿದರು. 'ವರ್ಸೇಲ್ಸ್ ಒಪ್ಪಂದಕ್ಕೆ ಸಹಿ ಹಾಕಿದ ಸರ್ಕಾರ ದೇಶದ್ರೋಹಿ. ಅದು ಕೂಡಲೇ ನಿವೃತ್ತವಾಗಲಿ' ಎಂಬುದೇ ಅವರ ಕೂಗು. ಸರ್ಕಾರವು ಆ ಮೆರವಣಿಗೆಗಳ ಮೇಲೆ, ಪ್ರದರ್ಶನಗಳ ಮೇಲೆ ಗುಂಡು ಹಾರಿಸಿ ನೂರಾರು ಮಂದಿಯ ಕೊಲೆಮಾಡಿತು. ಆದರೂ ವಿದ್ಯಾರ್ಥಿಗಳೂ ಜನತೆಯೂ ಎದೆಗುಂದಲಿಲ್ಲ. ಎಲ್ಲೆಲ್ಲಿಯೂ ವಿದ್ಯಾರ್ಥಿ ಸಂಘಗಳು ಹುಟ್ಟಿಕೊಂಡುವು. ಸರ್ಕಾರವು ವಿದ್ಯಾರ್ಥಿಗಳ ಮೇಲೆ ಚಿತ್ರ

ಹಿಂಸೆ ಮಾಡಿದಷ್ಟೂ ವಿದ್ಯಾರ್ಥಿ ಸಂಘಗಳು ದೇಶಾದಂತ್ಯ ಬೆಳೆಯಲಾರಂಭ ವಾದುವು ; ತುಳಿದಷ್ಟೂ ಚಿಗುರಿದವು. ಕೊನೆಗೆ ಜನತೆಯ ಒತ್ತಾಯದಿಂದ ೧೯೧೯ ನೆಯ ಮೇ ೪ ರಂದು ಸರ್ಕಾರ ರಾಜೀನಾಮೆ ಕೊಡಬೇಕಾಯಿತು. ಮುಂದೆ ಕಗ್ಗತ್ತಲು—ಎಷ್ಟು ದಿನ ಈ ಚಳುವಳಿ ನಡೆಯಬೇಕಾದೀತೋ ಕ್ರಾಂತಿ ಜರುಗೀತೋ ಯಾರಿಗೂ ತಿಳಿಯದು. ಆದರೆ ಇದುವರೆಗೂ ಅಧೀನ ಪ್ರಾಂತ್ಯ, ವಸಾಹತು ಆಗುವ ಸ್ಥಿತಿಯಲ್ಲಿದ್ದ ಚೀನಕ್ಕೆ ಒಳ್ಳೆಯ ದಿನಗಳು ಬಂದವೆಂದೂ, ಅದಕ್ಕೆ ಮೇ ೪ ರ ಪ್ರದರ್ಶನಗಳೇ ನಿದರ್ಶನವೆಂದೂ ಚೀನೀ ಕ್ರಾಂತಿಕಾರರಿಗೆ ನಂಬಿಕೆಯಾಗಿತ್ತು.

## ಜನಜಾಗೃತಿ

ಚೀನೀ ಜನಾಂಗದ ರಾಷ್ಟ್ರೀಯ ಜಾಗೃತಿಯಲ್ಲಿ ಮೇ ೪ರ ಚಳುವಳಿ ಒಂದು ನೂತನ ಯುಗವನ್ನು ತಂದಿತು. ಚೀನೀ ರಾಷ್ಟ್ರೀಯತೆಗೆ ರೂಪು ಗೊಟ್ಟುದೇ ಮೇ ೪ರ ಚಳುವಳಿ. ಅದಿಲ್ಲದಿದ್ದರೆ ಮಹಾ ಕ್ರಾಂತಿಯಾಗಲಿ, ಕೃಷಿಕ ಕ್ರಾಂತಿಯಾಗಲೀ, ಇಲ್ಲವೇ ಈಗಿನ ಜಪಾನೀ ವಿರುದ್ಧ ಹೋರಾಟ ವಾಗಲೀ ಅಸಾಧ್ಯವಾಗುತ್ತಿತ್ತು. ೧೯೧೯ ನೆಯ ಮೇ ೪ರಿಂದ ಚೀನದಲ್ಲಿ ಹೊಸ ಜಾಗೃತಿ, ಹೊಸ ಹುಟ್ಟು ಉಂಟಾಯಿತೆನ್ನಬಹುದು.

ವಿದ್ಯಾರ್ಥಿಗಳೆಲ್ಲರೂ ಸೇರಿ ೧೯೧೮ ರಲ್ಲಿಯೇ 'ಚೀನೀ ಸಾಮ್ಯವಾದೀ ಯುವಕರ ತಂಡ' [Chinese Socialist Youth] ವನ್ನು ಸ್ಥಾಪಿಸಿ ಕೊಂಡಿದ್ದರು. ಈ ವಿದ್ಯಾರ್ಥಿಗಳೆಲ್ಲರೂ ರಷ್ಯದ ರಾಜ್ಯಕ್ರಾಂತಿಯಿಂದ ಸ್ಫೂರ್ತಿ ಪಡೆದವರು. ಇವರ ಜತೆಗೆ ಎಷ್ಟೋ ಮಂದಿ ಮಧ್ಯವರ್ಗದವರೂ ಕಾರ್ಮಿಕರೂ ಕೂಡಿಕೊಂಡಿದ್ದರು.

ಚೀನದಲ್ಲಿ ಕಾರ್ಮಿಕರ ಬೆಳವಣಿಗೆಯನ್ನು ನಾವು ಗಮನಿಸಬೇಕು. ವಿದೇಶೀಯರ 'ವಿಶೇಷ ಪ್ರದೇಶಗಳು' ವಿದೇಶೀ ವಸಾಹತುಗಳಾದ ಮೇಲೆ ಬಂಡವಾಳಗಾರರು ಅಲ್ಲಿ 'ಕಾರ್ಖಾನೆಗಳನ್ನು ಸ್ಥಾಪಿಸಲಾರಂಭಿಸಿದರು. ವಿದೇಶೀ ಬಂಡವಾಳದ ಈ ಕಾರ್ಖಾನೆಗಳಲ್ಲಿ ಚೀನೀಯರನ್ನೇ ದುಡಿಸು ತ್ತಿದ್ದುದು. ದಿನೇ ದಿನೇ ಕಾರ್ಖಾನೆಗಳ ಸಂಖ್ಯೆ ಹೆಚ್ಚುತ್ತ ಬಂದಿತು.

ಚೀನದ ಒಳಭಾಗದಲ್ಲಿದ್ದ ರೈತರು ತಮ್ಮ ಸ್ವಾಮಿಗಳ ಕಾಟ ತಡೆಯಲಾರ ದೆಯೋ, ಅಥವಾ ಬರಗಾಲದಿಂದ ಬರ್ಗೈಯಾಗಿಯೋ, ಅಂತೂ ಕೆಟ್ಟು ಪಟ್ಟಣ ಸೇರುತ್ತಿದ್ದರು. ವಿದೇಶೀ ವಾಣಿಜ್ಯಕ್ಕೆ ಚೀನೀ ಚಕ್ರವರ್ತಿ ಒಪ್ಪಿದ ಮೇಲೆ ಅಗ್ಗವಾದ ಸಾಮಾನುಗಳು ಚೀನದಲ್ಲಿ ಮಾರಾಟವಾಗಲಾರಂಭ ವಾಯಿತು. ಇದರಿಂದ ಚೀನರ ಗೃಹಕೈಗಾರಿಕೆ ಮೂಲೆಗೆ ತಳ್ಳಲ್ಪಟ್ಟಿತು. ಹಾಗೂ ಹೀಗೂ ಕಷ್ಟಪಟ್ಟು ಭೂಮಿಯ ಬೇಸಾಯದ ಜೊತೆಗೆ ಸಣ್ಣ ಪುಟ್ಟ ಕೈಗಾರಿಕೆಗಳಿಂದ ಹೊಟ್ಟೆ ಹೊರೆಯುತ್ತಿದ್ದ ರೈತರಿಗೆ ಕೈ ಕಟ್ಟಿದಂತಾಯಿತು. ಇದರ ಜೊತೆಗೆ ಕಾರ್ಖಾನೆಯಲ್ಲಿನ ಕೂಲಿಯ ಹೊಂಗನಸು ಬೇರೆ. ಇವೆಲ್ಲ ಕಾರಣಗಳಿಂದ ನೂರಾರು ಮಂದಿ ರೈತರು ತಮ್ಮ ಭೂಮಿ ಕಾಣಿಗಳನ್ನು ಬಿಟ್ಟು ಕಾರ್ಖಾನೆಗಳಲ್ಲಿ ಕೂಲಿ ಮಾಡುವುದಕ್ಕಾಗಿ ನಗರಗಳಿಗೆ ನುಗ್ಗಿದರು.

ಬಂಡವಾಳಶಾಹಿ ಬೆಳೆಯುವುದು ಎಲ್ಲಾ ದೇಶಗಳಲ್ಲಿಯೂ ಒಂದೇ ರೀತಿಯಲ್ಲಿ. ಕಾರ್ಖಾನೆಯಲ್ಲಿ ಕೂಲಿಗೆ ಕಾರ್ಮಿಕರನ್ನು ಹಚ್ಚಿ ಅವರ ಅತಿರಿಕ್ತ ದುಡಿಮೆಯ ಲಾಭವನ್ನು ತನ್ನದಾಗಿಸಿಕೊಳ್ಳುವ ಬಂಡವಾಳಗಾರರು ಎಲ್ಲ ದೇಶಗಳಲ್ಲಿಯೂ ಒಂದೇ ರೀತಿಯಲ್ಲಿದ್ದಾರೆ. ಕೆಲಮಂದಿ ಸಿರಿವಂತರಿಗಾಗಿ ಬಹುಮಂದಿ ಬಡವರು ದುಡಿಯುವುದು ಇದರ ರೀತಿ. ಚೀನದಲ್ಲಿಯೂ ಇದೇ ರೀತಿ ಅನುಸರಿಸಲ್ಪಟ್ಟಿತು. ಕಾರ್ಮಿಕರ ಸಂಖ್ಯೆ ಏರುತ್ತ ಬಂದಿತು. ಕೆಲಸ ಕೇಳುವವರ ಸಂಖ್ಯೆ ಹೆಚ್ಚಿತು. ಆರ್ಥಿಕವಾಗಿ ಚೀನದಲ್ಲಿ ಎಲ್ಲೆಲ್ಲಿಯೂ ಬಡತನ ತುಂಬಿತ್ತು. ಅಂತರ ರಾಷ್ಟ್ರೀಯ ಬಂಡವಾಳ ನಗರಗಳಲ್ಲಿ ಬಹಳ ಪ್ರಬಲವಾಗಿದ್ದಿತು. ಕಾರ್ಮಿಕರು ಹೆಚ್ಚುಹೆಚ್ಚಾಗಿ ಬಂದಂತೆಲ್ಲಾ ಕೂಲಿಯ ದರ ಕಡಿಮೆಯಾಗಿ ದುಡಿಮೆಯ ಕಾಲ ಹೆಚ್ಚಾಯಿತು. ಶಾಂಗ್ಹೈ, ಕ್ಯಾಂಟನ್ ಮುಂತಾದ ನಗರಗಳಲ್ಲಿ, ವಿದೇಶೀ ವಸಾಹತುಗಳಲ್ಲಿ ಕಾರ್ಖಾನೆಗಳು ಬಹಳ ವಾಗಿದ್ದುವು. ಅಲ್ಲಿಯ ದುಡಿತದ ಕಾಲ ದಿನಕ್ಕೆ ೧೨ ರಿಂದ ೧೬ ಗಂಟೆಗಳು. ಒಂದೊಂದು ಬಾರಿ ಇದು ೧೮ ಗಂಟೆಗಳಾಗುತ್ತಿದ್ದುದೂ ಉಂಟು. ಈ ಕಾರ್ಖಾನೆಗಳಲ್ಲಿ ಅವರ ದುಡಿಮೆಗೆ ಸಿಗುತ್ತಿದ್ದ ಪ್ರತಿಫಲ ಬರಿಯ ಊಟ ಮಾತ್ರ! ಚೀನದ ಮಧ್ಯಯುಗದ ಪದ್ಧತಿಯಂತೆ ಸೇವಕ ತನ್ನ ಒಡೆಯನ ಮನೆಯಲ್ಲಿಯೇ ಉಳಿದುಕೊಂಡು ಲೆಕ್ಕಾಚಾರವಿಲ್ಲದೆ ಹಗಲೂ ರಾತ್ರಿ ದುಡಿಯುತ್ತಿದ್ದ. ಅವನಿಗೆ ಈ ಕಾರ್ಖಾನೆಗಳಲ್ಲಿ ೧೬ ಗಂಟೆಗಳ ಕಾಲ

ದುಡಿಯುವುದು ಒಳ್ಳೆಯದಾಗಿ ತೋರಿತು. ಈ ದುರವಸ್ಥೆಯನ್ನು ವಿದೇಶೀ ಬಂಡವಾಲಿಗರು ತಮ್ಮ ಸ್ವಾರ್ಥಕ್ಕಾಗಿ ಉಪಯೋಗಿಸಿಕೊಂಡರು.

ಕೆಲಸಗಾರರ, ಕಾರ್ಮಿಕರ ಸ್ಥಿತಿ ಬಹಳ ವಿಷಮವಾಗಿತ್ತು. ಎಷ್ಟೋ ಮಂದಿ ಹೇಳಹೆಸರಿಲ್ಲದೆ ಸಾಯುತ್ತಿದ್ದರು. ಯಾವಾಗ ಕಾರ್ಮಿಕರ ಮೇಲೆ ದಬ್ಬಾಳಿಕೆ ಹೆಚ್ಚುತ್ತದೋ ಆಗ ಕಾರ್ಮಿಕರಿಗೆ ವರ್ಗಸ್ಮೃತಿ, ವರ್ಗಜಾಗೃತಿ ಬಂದು ಎಚ್ಚತ್ತುಕೊಳ್ಳುವುದು ಸ್ವಾಭಾವಿಕ ನಿಯಮ. ಚೀನದ ಕಾರ್ಮಿಕರೂ ಕೂಡ ದಬ್ಬಾಳಿಕೆಯನ್ನೆದುರಿಸಿ ತಮ್ಮ ಹಕ್ಕುಗಳನ್ನು ಕಾದಿರಿಸಲು ಸಂಘಗಳಲ್ಲಿ ಕೂಡಲಾರಂಭಿಸಿದರು. ಅವರಿಗೆ ಚೀನೀಯ ಸಾಮ್ಯವಾದೀ ಯುವಕರು ಬೆಂಬಲವಾಗಿ ಸಹಾಯ ನೀಡುತ್ತಿದ್ದರು. ಎಲ್ಲೆಲ್ಲಿ ಕಾರ್ಖಾನೆಗಳಿದ್ದುವೋ ಅಲ್ಲೆಲ್ಲ ಕಾರ್ಮಿಕರ ಸಂಘಗಳು ಸ್ಥಾಪಿತವಾದುವು. ಹಾಂಗ್ ಕಾಂಗ್, ಕ್ಯಾಂಟನ್ ಮುಂತಾದ ನಗರಗಳಲ್ಲಿ ಮೊದಲು ಕಾರ್ಮಿಕ ಸಂಘಗಳು ಸ್ಥಾಪಿತವಾದುವು. ಕೂಡಲೇ ಕಾರ್ಖಾನೆಯ ಒಡೆಯರು ಕಾರ್ಮಿಕರ ಮೇಲೆ ರೇಗಿಬಿದ್ದರು. ಎಷ್ಟೋ ಮಂದಿ ಕಾರ್ಮಿಕರನ್ನು ಕೊಲೆಮಾಡಿಸಿದರು. ಎಷ್ಟೋ ಮಂದಿಯನ್ನು ಸೆರೆಗೆ ಕಳುಹಿಸಿದರು. ಆದರೆ ಕಾರ್ಮಿಕರು ಎದೆಗುಂದದೆ ಸಂಘಗಳನ್ನು ಬೆಳೆಸಿದರು. ೧೯೨೨ ರಲ್ಲಿ ನಾವಿಕರ ಅಸಹಕಾರ ಮುಷ್ಕರ ಆರಂಭವಾಯಿತು. ಮುಷ್ಕರ ೫೦ ದಿನಗಳ ಕಾಲ ಸತತವಾಗಿ ನಡೆದು ಜಯಪ್ರದವಾಗಿ ಕೊನೆಗೊಂಡಿತು. ಆದರಿಂದ ಚೀನೀ ಕಾರ್ಮಿಕರು ಜಗತ್ತಿನ ಕಾರ್ಮಿಕರಿಗೆ ಯಾವ ವಿಚಾರದಲ್ಲಿಯೂ ಕಡಿಮೆಯಿಲ್ಲವೆಂಬುದೂ ಬಂಡವಾಳಿಗರು ಯಾವುದೇ ಜನಾಂಗದವರಾಗಲಿ, ಕಾರ್ಮಿಕರ ಒಗ್ಗಟ್ಟಿನ ಮುಂದೆ ಮಣಿಯಬೇಕಾಗುವುದೆಂದೂ ಸ್ಥಿರವಾಯಿತು. ಚೀನೀ ರಾಷ್ಟ್ರೀಯ ಸರ್ಕಾರ ಕೂಡ ಯಾವುದನ್ನೆದುರಿಸಲಾರದೆ ತೆಪ್ಪಗೆ ಕುಳಿತಿತ್ತೋ, ಆ ವಿದೇಶೀ ಬಂಡವಾಳದ ಶಕ್ತಿಯನ್ನು ಕಾರ್ಮಿಕ ಶಕ್ತಿಯು ಸೋಲಿಸಿತು. ೧೯೨೩ ರಲ್ಲಿ ಎಲ್ಲೆಲ್ಲಿಯೂ ರೈಲ್ವೆ ಕೆಲಸಗಾರರು ಮುಷ್ಕರ ಹೂಡಿದರು. ಈ ಮುಷ್ಕರದಲ್ಲಿ ಸುಮಾರು ೨೦,೦೦೦ ಕ್ಕೆ ಮೇಲ್ಪಟ್ಟ ಕಾರ್ಮಿಕರು ಭಾಗವಹಿಸಿದ್ದರು. ಆಗ ಸರ್ಕಾರದ ಪೋಲೀಸರಿಗೂ ಕಾರ್ಮಿಕರಿಗೂ ಘರ್ಷಣೆಯಾಗಿ ೬೦ ಮಂದಿ ಕಾರ್ಮಿಕರು ಸತ್ತರು. ಕಾರ್ಮಿಕವರ್ಗ ಯಾವ ಜನಾಂಗದ್ದೆ ಆದರೂ ಅದನ್ನು ಶೋಷಿಸಿ ಹೊಟ್ಟೆ ತುಂಬಿಕೊಳ್ಳುವ ಬಂಡವಾಳಿಗ ವರ್ಗ ಅದನ್ನು

ದ್ವೇಷಿಸುತ್ತದೆ. ಈ ವರ್ಗದ್ವೇಷವು ವರ್ಗ ಕಲಹದಲ್ಲಿ ಕೊನೆಗಾಣುತ್ತದೆ. ಬಂಡವಾಲಿಗ ಮತ್ತು ಕಾರ್ಮಿಕ ಇಬ್ಬರೂ ಅಧಿಕಾರಕ್ಕಾಗಿ ಹೋರಾಡುತ್ತಾರೆ. ಇದರಲ್ಲಿ ಜನಾಂಗ, ಜನಾಂಗಗಳ ವ್ಯತ್ಯಾಸವಿಲ್ಲವೆಂಬುದು ಚೀನೀ ಕಾರ್ಮಿಕರಿಗೆ ಆಗ ಮೊದಲ ಬಾರಿ ಮನದಟ್ಟಾಯಿತು. ೧೯೨೩ ರ ಮೇ ೧ ರಂದು [ಮೇ ದಿನಾಚರಣೆ] ಕ್ಯಾಂಟನ್ ನಗರದಲ್ಲಿ ಚೀನೀ ರಾಷ್ಟ್ರೀಯ ಕಾರ್ಮಿಕರ ಸಮ್ಮೇಳನ ಜರುಗಿತು. ಈ ಸಮ್ಮೇಳನ ಚೀನದಲ್ಲಿ ನಡೆದ ಮೊದಲನೆಯ ಕಾರ್ಮಿಕ ಸಮ್ಮೇಳನ. ಈ ಸಮ್ಮೇಳನಕ್ಕೆ ಸುಮಾರು ೨೫ ಲಕ್ಷ ಸುಸಂಘಟಿತ ಕಾರ್ಮಿಕರಿಂದ ಚುನಾಯಿತ ಪ್ರತಿನಿಧಿಗಳು ಬಂದು ಭಾಗವಹಿಸಿದರು. ೧೯೨೫ ರಲ್ಲಿ ಎರಡನೆಯ ಕಾರ್ಮಿಕ ಸಮ್ಮೇಳನ ನಡೆದು ಅಖಿಲ ಚೀನಾ ಕಾರ್ಮಿಕ ಸಂಘವು ಸ್ಥಾಪಿತವಾಯಿತು. ಕಾರ್ಮಿಕರ ನಾಯಕರೆಲ್ಲರೂ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯರಾಗಿದ್ದರು. ಕಮ್ಯುನಿಸ್ಟ್ ಪಾರ್ಟಿಯ ಹುಟ್ಟು ಬೆಳವಣಿಗೆಗಳನ್ನು ಹೇಳುವಾಗ ಈ ಕಾರ್ಮಿಕ ಸಮ್ಮೇಳನಗಳು ಕಮ್ಯುನಿಸ್ಟ್ ಪಾರ್ಟಿಯವರ ಕೆಲಸವನ್ನು ಹೇಗೆ ತೋರಿದುವೆಂಬುದನ್ನು ನೋಡೋಣ.

೧೯೨೩ ರ ವೇಳೆಗಾಗಲೇ ಡಾಕ್ಟರ್ ಸುನ್-ಯಾತ್-ಸೇನ್‌ರ ನಾಯಕತ್ವದಲ್ಲಿ ಕೊಮಿಂಟಾಂಗ್ ಬಲಗೊಂಡಿತ್ತು. ಛಿದ್ರಛಿದ್ರವಾಗಿದ್ದ ಕೊಮಿಂಟಾಂಗ್ ಪಕ್ಷವನ್ನು ಪುನರ್ವ್ಯವಸ್ಥೆಗೊಳಿಸಲು ಡಾಕ್ಟರ್ ಸುನ್-ಯಾತ್-ಸೇನ್ ಬಹಳ ಪ್ರಯತ್ನಮಾಡುತ್ತಿದ್ದ. ೧೯೨೦ ರ ನವೆಂಬರ್‌ನಲ್ಲಿ ಹೆಸರಿಲ್ಲದೆ ಅಳಿದುಹೋಗಿದ್ದ ರಾಷ್ಟ್ರೀಯ ಗುಪ್ತ ಸಂಘಗಳು ಚೇತರಿಸಿಕೊಂಡುವು. ಸುನ್ ಯಾತ್ ಸೇನನ ನಾಯಕತ್ವದಲ್ಲಿ ಮಿತವಾದಿ ರಾಷ್ಟ್ರೀಯತೆಯ ಚೀನರೆಲ್ಲರೂ ಕೊಮಿಂಟಾಂಗ್ ಪಕ್ಷದಲ್ಲಿ ಕೂಡಿಕೊಂಡರು. ಈ ವೇಳೆಗಾಗಲೇ ಕಮ್ಯುನಿಸ್ಟ್ ಪಾರ್ಟಿಯೂ ಪ್ರಬಲ ರಾಜಕೀಯ ಪಕ್ಷವಾಗಿದ್ದಿತು. ೧೯೨೩ ರಲ್ಲಿಯೇ ಕೊಮಿಟಾಂಗ್-ಕಮ್ಯುನಿಸ್ಟ್ ಪಕ್ಷಗಳು ಒಂದುಗೂಡಿ ಕೆಲಸ ಮಾಡಬೇಕೆಂದು ತೀರ್ಮಾನಿಸಲ್ಪಟ್ಟಿತು. ಕಮ್ಯುನಿಸ್ಟರು ಕೊಮಿಂಟಾಂಗಿನ ಪ್ರಮುಖ ಸದಸ್ಯರಾದರು.

ಚೀನದಲ್ಲಿನ ಕೇಂದ್ರ ಆಡಳಿತವು ಎಷ್ಟು ದುರ್ಬಲವಾಗಿತ್ತೆಂಬುದನ್ನು ಆಗಲೇ ಹೇಳಲಾಗಿದೆ. ಅಲ್ಲಲ್ಲಿ ಸ್ವತಂತ್ರ ಪಾಳೆಯಗಾರರು ರೈತರಿಗೆ

ಅಸಾಧ್ಯ ಹಿಂಸೆ ಕೊಡುತ್ತಿದ್ದರು. ಅವರನ್ನು ತಡೆಗಟ್ಟುವವರೇ ಇರಲಿಲ್ಲ. ಈ ಪಾಳೆಯಗಾರರಿಂದ ಸಂಬಳಕ್ಕೆ ಗೊತ್ತುಮಾಡಲ್ಪಟ್ಟಿದ್ದ ದರೋಡೆಗಾರರ ಗುಂಪುಗಳು ಹಳ್ಳಿಗಳ ಮೇಲೆ ನುಗ್ಗಿ ಪೈರು, ಬೆಳೆ, ಬಂಗಾರ ಮುಂತಾದು ವನ್ನೂ ಪಾಳೆಯಗಾರರ ಭೋಗಕ್ಕಾಗಿ ಯುವತಿಯರನ್ನೂ ಕದ್ದೊಯ್ಯುತಿದ್ದರು. ಈ ದರೋಡೆಗಾರರ ಗುಂಪುಗಳೂ ಚೀನದ ಗುಪ್ತ ಸಂಘಗಳಂತೆ ವಿಚಿತ್ರ ಹೆಸರುಗಳನ್ನಿಟ್ಟುಕೊಂಡಿದ್ದುವು. ಇದರ ವಿರುದ್ಧವಾಗಿ ಅಲ್ಲಲ್ಲಿನ ರೈತರೂ ಜಮೀನುದಾರರೂ ಯುದ್ಧ ಮಾಡಲು ಯತ್ನಿಸುತ್ತಿದ್ದರು. ಆದರೆ ಅವರಿಂದ ಏನೂ ಉಪಯೋಗವಾಗುತ್ತಿರಲಿಲ್ಲ. ಮುಖ್ಯವಾಗಿ ಹಳ್ಳಿಗಳಿಗೆ ಬೇಕಾಗಿದ್ದುದು ಸಾಮಾಜಿಕ ಸುಧಾರಣೆ. ಅದನ್ನು ತರಲು, ಅದಕ್ಕಾಗಿ ಯೋಜನೆ ಸಿದ್ಧಗೊಳಿಸುವ ಮತ್ತು ಸಾಧಿಸುವ ಕಾರ್ಯ ನಡೆಸಲು ಈ ಜಮೀನುದಾರ ರಿಂದ ಸಾಗಲಿಲ್ಲ. ಕೊನೆಗೆ ಮೊಟ್ಟಮೊದಲ ಬಾರಿಗೆ ೧೯೨೩ ರಲ್ಲಿ ರೈತರ ಸಂಘ ಚೀನದಲ್ಲಿ ಸ್ಥಾಪಿತವಾಯಿತು. ಇದರ ಮುಖ್ಯ ನೀತಿಯೆಂದರೆ ಹೆಚ್ಚು ಗುತ್ತಿಗೆ ಮತ್ತು ಒತ್ತೆಕೊಳ್ಳುವವರ ಸುಲಿಗೆಗಳನ್ನು ಎದುರಿಸುವುದು. ಈ ರೈತ ಸಂಘದ ಸ್ಥಾಪನೆಯೊಂದಿಗೆ ಚೀನದ ಹಳ್ಳಿಗಳೂ ರಾಷ್ಟ್ರೀಯ ಚಳುವಳಿಯನ್ನು ಸೇರಿದುವು ಎಂದು ಎಣಿಸಬಹುದು. ಚೀನದ ಎಲ್ಲಾ ಕಡೆಯಲ್ಲಿಯೂ ರೈತಸಂಘಗಳು ಸ್ಥಾಪಿತವಾಗಲಾರಂಭವಾಯಿತು. ಇದೂ ಜನಜಾಗೃತಿಯ ಮತ್ತೊಂದು ಸೂಚನೆ. ೧೯೨೩ ರಲ್ಲಿ ಕಮ್ಯುನಿಸ್ಟರು ಕೋಮಿಂಟಾಂಗಿನಲ್ಲಿ ಕೂಡಿಕೊಂಡಾಗ, ಚೀನಾಕ್ಕೂ ರಷ್ಯಕ್ಕೂ ಒಪ್ಪಂದವಾಗಿತ್ತು. ರಷ್ಯದಲ್ಲಿ ಜಾರನ ಪ್ರಭುತ್ವ ವಿನಾಶವಾಗಿ ಅಕ್ಟೋಬರ್ ಕ್ರಾಂತಿಯಾಗಿ ಜನತೆಗೆ ಅಧಿಕಾರ ಬಂದ ಮೇಲೆ ಸೋವಿಯಟ್ ಪದ್ಧತಿಯು ಆಚರಣೆಗೆ ಬಂದಿತು. ಸೋವಿಯಟ್ ರಷ್ಯಾ ಚೀನದೊಂದಿಗೆ ಸ್ನೇಹದಿಂದ ವರ್ತಿಸಿತು. ಬ್ರಿಟನ್ ಮತ್ತು ಅಮೆರಿಕಗಳು ಚೀನದ ಮೇಲೆ ತಮ್ಮ ಆರ್ಥಿಕ ಆಡಳಿತವನ್ನು ಬಲಪಡಿಸುವ ಯೋಚನೆಯಲ್ಲಿದ್ದಾಗ ಸೋವಿಯಟ್ ರಷ್ಯಾ, ಚೀನದಲ್ಲಿ ತನಗಿದ್ದ ಎಲ್ಲ ವಿಶೇಷ ಹಕ್ಕುಗಳನ್ನೂ ತಾನಾಗಿಯೇ ಬಿಟ್ಟುಕೊಟ್ಟಿತು. ಇದರಿಂದ ಚೀನರಿಗೆ ರಷ್ಯಾದ ಬಗ್ಗೆ ಭರವಸೆ ಬರಲು ಕಾರಣವಾಯಿತು. ಡಾಕ್ಟರ್ ಸುನ್-ಯಾತ್-ಸೇನ್ ಕೊಮಿಂಟಾಂಗ್ ಪಕ್ಷದ ಪರವಾಗಿ ರಷ್ಯದೊಂದಿಗೆ ಸಂಪರ್ಕ ಬೆಳೆಸಿದ್ದನು. ಸೋವಿಯಟ್ ರಷ್ಯದೊಂದಿಗೆ ಸಮಾನತೆಯ ಆಧಾ

ರದ ಮೇಲೆ ಒಪ್ಪಂದಕ್ಕೆ ಕೂಡ ಬಂದಿದ್ದನು. ಸೋವಿಯಟ್ ರಷ್ಯದ ಪ್ರತಿನಿಧಿಯಾದ ಬೊರೊಡಿನ್‌ನ ನಿಜವಾದ ಹೆಸರೇನೆಂದು ಅಮೆರಿಕನರು ಕೇಳಿದಾಗ ಡಾ. ಸುನ್ ಅವರಿಗೆ ಮೂಗು ಮುರಿಯುವಂತೆ ಉತ್ತರ ಕೊಟ್ಟನು. "ನೀವು ಯಾರೂ ನಮಗೆ ಸಹಾಯಮಾಡದೇ ಹೋದಿರಿ. ನಮ್ಮ ರಾಷ್ಟ್ರೀಯ ಚಳುವಳಿಯಲ್ಲಿ ಸೋವಿಯಟ್ ರಷ್ಯ ಮಾತ್ರ ನಮಗೆ ಸಹಾಯ ನೀಡಿದುದು."

೧೯೨೪ ನೆಯ ಜನವರಿ ೨೦ ರಂದು ಡಾ. ಸುನ್ ಕೊಮಿಂಟಾಂಗಿನ ಅಖಿಲ ಚೀನ ಸಮ್ಮೇಲನವನ್ನು ತೆರೆದ. ಅದು ಕೊಮಿಂಟಾಂಗಿನ ಮೊದಲನೆಯ ಅಧಿವೇಶನ. ಈ ಅಧಿವೇಶನ ಜನವರಿ ೨೦ರಿಂದ ೩೦ನೆಯ ತಾರೀಕಿನ ವರೆಗೂ ಹತ್ತು ದಿನಗಳ ಕಾಲ ಕ್ಯಾಂಟನ್ ನಗರದಲ್ಲಿ ಜರುಗಿತು. ಕೊಮಿಂಟಾಂಗ್ ಪಕ್ಷದಲ್ಲಿ ಕಮ್ಯುನಿಸ್ಟರೂ ಕೂಡಿದ್ದರು. ಕೊಮಿಂಟಾಂಗಿನ ಎಲ್ಲ ಕಾರ್ಯಗಳಲ್ಲಿಯೂ ಕಮ್ಯುನಿಸ್ಟರೇ ಮುಂದಾಳುಗಳಾಗಿರುತ್ತಿದ್ದರು. ಡಾ. ಸುನ್‌ನ ನಾಯಕತ್ವದಲ್ಲಿ ಕೊಮಿಂಟಾಂಗ್ ಪಕ್ಷ ಕೂಡ ರಷ್ಯದ ಕಮ್ಯುನಿಸ್ಟ್ ಪಾರ್ಟಿಯ ರೀತಿಯಲ್ಲಿಯೇ ಪುನರ್ವ್ಯವಸ್ಥೆಗೊಳಿಸಲ್ಪಟ್ಟು ರೂಪಿತವಾಯಿತು. ಡಾ. ಸುನ್-ಯಾತ್-ಸೇನನ ಜಗತ್ಪ್ರಸಿದ್ಧ ತತ್ವಗಳಾದ ಸಾನ್, ಮಿನ್, ಚುಐ [San, Min, Chu I] ಎಂದರೆ ಜನತೆಯ ಮೂರು ಸಿದ್ಧಾಂತಗಳು. ಕೊಮಿಂಟಾಂಗಿನಲ್ಲಿ ಅಂಗೀಕೃತವಾದುವು. ೧೯೨೪ ನೆಯ ಜನವರಿಯ ಈ ಕೊಮಿಂಟಾಂಗ್ ಅಧಿವೇಶನಕ್ಕೆ ಚೀನದ ಎಲ್ಲಾ ಭಾಗಗಳಿಂದಲೂ ಪ್ರತಿನಿಧಿಗಳು ಬಂದಿದ್ದರು. ಮಂಚೂರಿಯ, ಮಂಗೋಲಿಯ, ಟಿಬೆಟ್, ತುರ್ಕಿಸ್ತಾನ್ ಮತ್ತು ಬೇರೆ ದೇಶಗಳಿಗೆ ವಲಸೆ ಹೋಗಿದ್ದ ಚೀನರ ಪ್ರತಿನಿಧಿಗಳೂ ಈ ಅಧಿವೇಶನದಲ್ಲಿ ಭಾಗವಹಿಸಿದರು. ಕಾರ್ಮಿಕರಿಗೂ ರೈತರಿಗೂ ಅಧಿವೇಶನದಲ್ಲಿ ಪ್ರಾತಿನಿಧ್ಯವಿತ್ತು. ಕಾರ್ಮಿಕ ಸಂಘಗಳೂ, ರೈತಸಂಘಗಳೂ ಅಂಗೀಕೃತವಾದುವು. ಈ ಅಧಿವೇಶನದಲ್ಲಿಯೇ ಕೊಮಿಟಾಂಗ್ ಪುನರ್ವ್ಯವಸ್ಥಿತವಾಗಿ, ಅದರ ನೀತಿ ಬದಲಾದುದು. ಕಮ್ಯುನಿಸ್ಟರೂ ಕೊಮಿಂಟಾಂಗಿನಲ್ಲಿ ಸೇರಿಕೊಂಡರು. ಜಮೀನ್ದಾರಿ ಅನಾಯಕತೆಯನ್ನೂ ಪಾಳೆಯಗಾರರ ಸುಲಿಗೆಗಾರ ತಂಡವನ್ನೂ ತುಳಿದು ಪ್ರಜಾಸತ್ತೆಯನ್ನು ಏರ್ಪಡಿಸುವ ವಿಷಯದಲ್ಲಿ ಕಮ್ಯುನಿಸ್ಟರೂ ಕೊಮಿಂಟಾಂಗಿನವರೂ ಏಕಮತದವರಾಗಿದ್ದರು.

ಈ ಅಧಿವೇಶನದಲ್ಲಿಯೇ ಡಾ. ಸುನ್ ತನ್ನ ಪ್ರಸಿದ್ಧ ತತ್ವವನ್ನು

ಚೀನದ ಮುಂದೆ ಇಟ್ಟದು. ಜನತೆಯ ಮೂರು ಸಿದ್ಧಾಂತಗಳಲ್ಲಿ ಮೊದಲನೆಯದು—ಜನತೆಯ ರಾಷ್ಟ್ರೀಯತೆ. ವಿದೇಶೀ ಆಡಳಿತಕ್ಕೆ ಸಿಕ್ಕಿಕೊಂಡು ಚೀನವು ಅಧೀನ ಪ್ರಾಂತ್ಯವೋ, ವಸಾಹತೋ ಆಗಬಾರದು. ಜನತೆಯಲ್ಲಿ ರಾಷ್ಟ್ರೀಯ ಮನೋಭಾವವಿರಬೇಕು, ಚೀನ ಸ್ವತಂತ್ರವಾಗಿರಬೇಕು, ಎಲ್ಲಾ ಅಲ್ಪಸಂಖ್ಯಾಕ ಜನಾಂಗಗಳಿಗೂ ಸಂಪೂರ್ಣ ಸ್ವಾತಂತ್ರ್ಯಾಧಿಕಾರ ಕೊಡಬೇಕು ಎಂಬುವೇ ಸನ್ ಯಾತ್ ಸೇನನ ಸ್ವಾತಂತ್ರ್ಯ ಸೂತ್ರತ್ರಯದ ಮೊದಲ ಸೂತ್ರ. ಇದರಂತೆ ಚೀನದಲ್ಲಿ ವಿದೇಶೀ ದಬ್ಬಾಳಿಕೆಯಾಗಲೀ, ಒಂದು ಜನಾಂಗದ ಮೇಲೆ ಮತ್ತೊಂದು ಜನಾಂಗದ ಆಕ್ರಮಣವೇ ಆಗಲಿ ಇಲ್ಲದಂತೆ ಎಲ್ಲರಿಗೂ ಸ್ವಯಂ ನಿರ್ಣಯಾಧಿಕಾರವಿರಬೇಕು.

ಎರಡನೆಯ ಸಿದ್ಧಾಂತ—ಜನತೆಯ ಪ್ರಜಾಪ್ರಭುತ್ವ. ಪ್ರತಿಯೊಬ್ಬ ಪ್ರಜೆಗೂ ಸಮಾನ ಹಕ್ಕುಗಳಿರಬೇಕು. ಹೆಣ್ಣಾಗಲಿ, ಗಂಡಾಗಲಿ ಪ್ರತಿಯೊಬ್ಬನಿಗೂ ತನ್ನ ಮತ ಕೊಟ್ಟು ನಾಡಿನ ಆಡಳಿತದಲ್ಲಿ ಭಾಗವಹಿಸುವ ಹಕ್ಕಿರಬೇಕು. ಚೀನದಲ್ಲಿ ಅಧಿಕಾರ ಇದ್ದುದು ಪಾಳೆಯಗಾರರಿಗೆ, ಜಮೀನುದಾರರಿಗೆ ಮತ್ತು ಅವರ ಊಳಿಗದವರಿಗೆ, ಪರಿವಾರದವರಿಗೆ. ಅವರು ಆಡಿದುದೇ ಆಟ. ಅವರಂದುದೇ ವೇದವಾಕ್ಯ. ಚೀನದ ಮಹಾ ತಾತ್ವಿಕನೆಂದು ಹೆಸರಾದ ಕನ್ಫ್ಯೂಷಿಯಸ್ ಹೇಳಿದುದನ್ನು ನಾವು ಇಲ್ಲಿ ನೆನಪಿಗೆ ತಂದುಕೊಳ್ಳಬಹುದು—"ಅಧಿಕಾರಿಗಳಿಗಲ್ಲದೆ ಉಳಿದವರಿಗೇತಕ್ಕೆ ಆಡಳಿತದ ಚಿಂತೆ?" ಎಂದರೆ ಜನತೆಗೆ ಪ್ರಭುತ್ವದಲ್ಲಿ ಯಾವ ವಿಧವಾದ ಆಸಕ್ತಿಯೂ ಇರಲಾಗದೆಂದು. ಆದರೆ ಡಾ. ಸನ್-ಯಾತ್-ಸೇನನ ಎರಡನೆಯ ಸಿದ್ಧಾಂತದಂತೆ ಪ್ರತಿಯೊಬ್ಬರಿಗೂ ಮತ ಕೊಡುವ ಹಕ್ಕಿರಬೇಕು. ಚೀನದಲ್ಲಿ ಸ್ತ್ರೀಯರಿಗೆ ಚಿಕ್ಕಂದಿನಲ್ಲಿಯೇ "ಕಾಲು ಕಟ್ಟುವ" ಪದ್ಧತಿಯಿದೆ. ಎಂದರೆ ಕಾಲು ಸುಂದರವಾಗಿ ಬೆಳೆಯಲೆಂದು ಎಳೆತನದಲ್ಲಿಯೇ ಕಾಲುಗಳಿಗೆ ಕಬ್ಬಿಣದ ಪಾದರಕ್ಷೆಗಳನ್ನು ಹಾಕಿಬಿಡುತ್ತಾರೆ. ಡಾ. ಸನ್‌ನ ನಿರಂತರ ಶ್ರಮದ ಫಲವಾಗಿ ಅದು ಈಗ ನಿರ್ನಾಮವಾಗಿದೆ ಎನ್ನಬಹುದು. ಆದರೆ ೧೯೩೪ ರಲ್ಲಿ ಅದು ಸಾಧಾರಣ ಪದ್ಧತಿಯಾಗಿದ್ದುದು ಅಳಿದು ಮುಂದೆ ಈಗ ಸ್ತ್ರೀಯರಿಗೂ ಪುರುಷರಷ್ಟೇ ಸಮಾನ ಹಕ್ಕು ಕೊಡಲ್ಪಟ್ಟಿತು. ಎಲ್ಲರಿಗೂ ಮತ ಕೊಡುವ ಹಕ್ಕು, ವಾಕ್ಸ್ವಾತಂತ್ರ್ಯ, ಲೇಖನ ಸ್ವಾತಂತ್ರ್ಯ

ಮತ್ತು ಸಂಘ ಸ್ವಾತಂತ್ರ್ಯಗಳು ಇರಬೇಕು. ಕಾರ್ಮಿಕರಿಗೂ, ರೈತರಿಗೂ ತಮ್ಮ ತಮ್ಮ ಸಂಘಗಳಲ್ಲಿ ಸುಸಂಘಟಿತರಾಗಿರಲು ಹಕ್ಕಿರಬೇಕು.

ಮೂರನೆಯದಾಗಿ—ಜನತೆಯ ಜೀವನಾಧಾರ. ಜಮೀನುದಾರೀ ಪದ್ಧತಿಯಲ್ಲಿ ಸುಧಾರಣೆಗಳನ್ನು ತಂದು ರೈತರ ಜೀವನ ಸಾಕಷ್ಟು ಸುಖಕರ ವಾಗುವಂತೆ ಮಾಡುವ ಯೋಜನೆಯೂ ಕೂಡಿದೆ. ಕಾರ್ಮಿಕರಿಗೆ ಜೀವವಿಮೆ, ಸಹಕಾರ ಸಂಘಗಳು, ದುಡಿಮೆಯ ಮಿತಿ ದಿನಕ್ಕೆ ಎಂಟು ಗಂಟೆಯ ಕಾಲ ಮಾತ್ರವೇ ಎಂದು ನಿಗದಿಯಾಗುವುದು ಮುಂತಾಗಿ ಕೂಲಿಗಾರರ ಜೀವನ ಸಾಕಷ್ಟು ಸುಖಮಯವಾಗುವಂತೆ ಮಾಡುವ ಯೋಜನೆ ಮತ್ತು ಸ್ತ್ರೀ ಸ್ವಾತಂತ್ರ್ಯಗಳ ಯೋಜನೆಯೂ ಕೂಡಿದೆ. ಅಲ್ಲದೆ ನಾಡಿನಲ್ಲಿ ಪ್ರತಿಯೊಬ್ಬರಿಗೂ ಕಡ್ಡಾಯ ವಿದ್ಯಾಭ್ಯಾಸ ಆಗಲೇಬೇಕೆಂದೂ, ಒಂದು ಪ್ರಜಾ ಸೈನ್ಯ ಸ್ಥಾಪಿತವಾಗಬೇಕೆಂದೂ ಈ ಮೂರನೆಯ ತತ್ವದ ಯೋಜನೆಗಳು.

ಡಾ. ಸನ್-ಯಾತ್-ಸೇನನ ಈ ಮೂರು ಸಿದ್ಧಾಂತಗಳು ಚೀನದಲ್ಲಿ ಸಾಧಿಸಲ್ಪಟ್ಟಿದ್ದರೆ ಚೀನಕ್ಕೆ ಇಂದಿನ ವಿಷಮ ಪರಿಸ್ಥಿತಿ ಖಂಡಿತವಾಗಿಯೂ ಒದಗುತ್ತಿರಲಿಲ್ಲ. ಪ್ರಗತಿಗಾಮಿಯಾಗುತ್ತಿದ್ದ ಚೀನದ ಯುವಕ ಜನಾಂಗ ಡಾ. ಸನ್-ಯಾತ್-ಸೇನನ ಈ ಮೂರು ತತ್ವಗಳ ಆಧಾರದ ಮೇಲೆ ಒಂದಾಗಿ ಮುನ್ನಡೆದವು. ಈ ಮೂರು ತತ್ವಗಳನ್ನು ಅನುಷ್ಠಾನಕ್ಕೆ ತಂದು ಕಾರ್ಯರಂಗದಲ್ಲಿ ಫಲಕಾರಿಯಾಗಿಸಲು ಚೀನಕ್ಕೆ ರಷ್ಯದ ಸಹಾಯ ಅತ್ಯವಶ್ಯಕವಾಗಿತ್ತು; ಅದು ದೊರಕಿಯೂ ಇತ್ತು. ಕೊಮಿಂಟಾಂಗ್ ಅಧಿವೇಶನವು ಸೋವಿಯಟ್ ರಷ್ಯದೊಂದಿಗೆ ಸ್ನೇಹವನ್ನು ಘೋಷಿಸಿತು. ಡಾ. ಸನ್-ಯಾತ್-ಸೇನ್ ತನ್ನ ಭಾಷಣದಲ್ಲಿ ಸಮತಾವಾದಕ್ಕೂ ತನ್ನ ಮೂರು ತತ್ವಗಳಿಗೂ ಯಾವ ರೀತಿಯ ಭಿನ್ನತೆಯೂ ಇಲ್ಲವೆಂದೂ ತೋರಿಕೊಟ್ಟನು. "ಜನತೆಯ ಸಾಮಾಜಿಕ ಸಮಸ್ಯೆಗಳನ್ನು ಬಿಡಿಸಲು ಅತಿ ಶ್ರೇಷ್ಠ ಆದರ್ಶ ಪರಿಹಾರವೇ ಕಮ್ಯುನಿಸಂ ಅಥವಾ ಸಮತಾವಾದ"ವೆಂದು ಘೋಷಿಸಿದನು.

೧೯೨೪ರ ಮೇ ೩೧ರಂದು ಚೀನಕ್ಕೂ ಸೋವಿಯಟ್ ರಷ್ಯಾಕ್ಕೂ ಸಮಾನ ರಾಷ್ಟ್ರಗಳ ಮೈತ್ರಿಯ ಒಪ್ಪಂದವಾಯಿತು. ಚೀನದ ಪುನರ್ವ್ಯವಸ್ಥೆಗಾಗಿ ರಷ್ಯ ಕೈಗಾರಿಕಾ ಕುಶಲರನ್ನೂ, ಸೈನ್ಯ ಕುಶಲರನ್ನೂ, ಸಲಹೆಗಾರರನ್ನೂ ಕಳುಹಿಸಲು ಒಪ್ಪಿತು. ಅದೇ ತಿಂಗಳಲ್ಲಿಯೇ ವಾಂಪೋವ ನಗರದಲ್ಲಿ

ಸೈನಿಕ ವಿದ್ಯಾಲಯ ಆರಂಭಿಸಲ್ಪಟ್ಟಿತು. ಇವರಪೋಲ್ಸಿಚಾರಣೆ ರಷ್ಯನರ ಕೈಯಲ್ಲಿತ್ತು. ಕಮ್ಯುನಿಸ್ಟರೂ ಕೊಮಿಂಟಾಂಗಿನವರೂ ಅನ್ಯೋನ್ಯವಾಗಿದ್ದುಕೊಂಡು ಡಾ. ಸನ್-ಯಾತ್-ಸೇನನ ನಾಯಕತ್ವದಲ್ಲಿ ಚೀನದ ಪ್ರಗತಿಯನ್ನು ಕಾರ್ಯರೂಪದಲ್ಲಿ ತೋರುತ್ತಿದ್ದರು. . ಡಾ. ಸನ್-ಯಾತ್-ಸೇನ್ ಬಹಳ ಕಾಲ ಉಳಿಯಲಿಲ್ಲ. ೧೯೨೫ನೆಯ ಮಾರ್ಚಿ ೧೨ರಂದು ಆತ ಮರಣಹೊಂದಿದನು. ಚೀನೀ ರಾಷ್ಟ್ರೀಯತೆಯ ತಂದೆಯಾದ ಡಾ. ಸನ್ ಕಾಲವಶನಾದುದು ಚೀನದ ರಾಷ್ಟ್ರೀಯತೆಯ ಪ್ರಗತಿಗೇ ಒಂದು ಬಲವಾದ ಪೆಟ್ಟಾಯಿತು. ಚೀನದಲ್ಲಿನ ಐಕ್ಯತೆ, ಏಕನೀತಿ ಮತ್ತು ಕಾರ್ಯ ಬಹಳ ಕಾಲ ಹಾಗೆಯೇ ಮುನ್ನಡೆಯುವುದು ಅಸಾಧ್ಯವಾಯಿತು.

ಡಾ. ಸನ್ ಕಾಲವಾದರೂ ಕೂಡ ಕೆಲ ಕಾಲ ಆತನ ಅಮೋಘ ಪ್ರತಿಭೆಯ ಪ್ರಭಾವದಿಂದ ಕಾರ್ಯ ಸುಸೂತ್ರನಾಗಿ ಸಾಗುತ್ತಿತ್ತು. ೧೯೨೫ರಿಂದ ೧೯೨೭ರ ವರೆಗೆ ದೇಶದಲ್ಲಿ ರಾಷ್ಟ್ರೀಯತೆಯ ಚಳುವಳಿ ಬಹಳ ಪ್ರಬಲವಾಗಿತ್ತು. ಕಾರ್ಮಿಕರ ಮತ್ತು ರೈತರ ಸಂಘಗಳಿಗೂ ಕೊಮಿಂಟಾಂಗ್ ಪಕ್ಷಕ್ಕೂ ಹಿಂದೆಂದೂ ಇಲ್ಲದಷ್ಟು ಸಂಬಂಧ ಬೆಳೆದು ಬಂತು. ಇದು ಚೀನಕ್ಕೆ ಬಹಳ ಆಶಾದಾಯಕವಾದ ಚಿನ್ಹೆ. ೧೯೨೫ನೆಯ ಮೇ ೩೦ರಂದು ಶಾಂಗೈನಲ್ಲಿ ಕಾರ್ಮಿಕರ ಪ್ರಚಂಡ ಮುಷ್ಕರ ಆರಂಭವಾಯಿತು. ಇವರು ಮೆರವಣಿಗೆಯಲ್ಲಿ ಪ್ರದರ್ಶನ ನಡೆಸಿಕೊಂಡು ಹೋಗುವಾಗ ವಿದೇಶೀ ಸೈನಿಕರು ತಡೆಗಟ್ಟಿ ಗುಂಡು ಹಾರಿಸಿದರು. ಇದರಿಂದ ಕೆಲವರು ಕಾರ್ಮಿಕರು ಸತ್ತರು, ಅನೇಕರು ಗಾಯಗೊಂಡರು. ಮೇ ೩೦ ರಂದಿನ ಈ ಘಟನೆ ಆಗ ತಾನೆ ರಾಷ್ಟ್ರೀಯತೆಯ ಸುಳಿಯಲ್ಲಿ ಸಿಕ್ಕಿದ್ದ ಚೀನದ ಜನತೆಯನ್ನು ಹೊಡೆದೆಬ್ಬಿಸಿತು. ಎಲ್ಲೆಲ್ಲಿಯೂ ಕ್ರಾಂತಿಕಾರಕ ಚಳುವಳಿಗಳು ಆರಂಭವಾದುವು. ಅದೇ ವರ್ಷ ಹಾಂಗ್‌ಕಾಂಗಿನಲ್ಲಿ ಕೂಡ ಅದಕ್ಕೂ ಮಿಗಿಲಾದ ಕಾರ್ಮಿಕ ಮುಷ್ಕರ ಜರುಗಿತು. ಕೊಮಿಂಟಾಂಗ್ ಮತ್ತು ಕಮ್ಯುನಿಸ್ಟರು ಇವರಿಗೆ ತಮ್ಮ ಸಹಾನುಭೂತಿ ತೋರಿಸಿದರು.

ಚೀನದ ಉತ್ತರದಲ್ಲಿ ಮಾತ್ರ ಇನ್ನೂ ಕೆಲವರು ಪಾಳೆಯಗಾರರು ತಮ್ಮ ಪಬ್ಬಾಳಿಕೆಯನ್ನು ನಡೆಸುತ್ತಿದ್ದರು. ಇವರು ಕೇಂದ್ರ ಸರಕಾರವನ್ನು ವಿರೋಧಿಸುತ್ತಿದ್ದುದಷ್ಟೇ ಅಲ್ಲದೆ ಚೀನೀ ವಿರೋಧಿ ಸಾಮ್ರಾಜ್ಯಶಾಹಿಗಳ ಕಪಿ

ಮಾತಿಗೆ ಮಾರುಹೋಗಿದ್ದರು. ಸ್ಥಿತಿಯನ್ನು ಹಾಗೆಯೇ ಬೆಳೆಯಲು ಬಿಟ್ಟಿದ್ದರೆ ಚೀನಕ್ಕೆ ಚೀನವೇ ಸಾಮ್ರಾಜ್ಯಶಾಹಿಗಳ ಬಾಯಿಗೆ ಬಲಿಯಾಗುತ್ತಿತ್ತು. ಇದನ್ನರಿತು ಕೇಂದ್ರ ಸರಕಾರವು "ಉತ್ತರ ದಿಗ್ವಿಜಯ"ಕ್ಕೆ ಹೊರಟಿತು. ಉತ್ತರ ಚೀನದ ಈ ಪುಂಡ ಪಾಳೆಯಗಾರರನ್ನು ಸದೆಬಡಿಯುವ ಈ ದಂಡಯಾತ್ರೆ ಚೀನೀ ಜನತೆಯ ರಾಷ್ಟ್ರೀಯತೆಯ ಅತಿ ಹಿರಿಯ ನಿದರ್ಶನ. ಇದಕ್ಕೆ ಪ್ರತಿಯೊಬ್ಬ ಚೀನೀಯನೂ ತನ್ನಿಂದಾದಷ್ಟು ಸಹಾಯ ನೀಡಿದನು. ವಿದೇಶೀ ಬಂಡವಾಲಿಗರಿಂದಲೂ, ಉತ್ತರ ಚೀನದ ಪಾಳೆಯಗಾರರ ಪ್ರಭುತ್ವದಿಂದಲೂ ಬಿಡುಗಡೆ ಹೊಂದಲು ಚೀನೀ ಜನತೆ ಈ ದಂಡಯಾತ್ರೆಯಲ್ಲಿ ಸಂಪೂರ್ಣವಾಗಿ ಸಹಕರಿಸಿತು. ಕಮ್ಯುನಿಸ್ಟರೂ ಕೊಮಿಟಾಂಗಿನವರೂ ಸೇರಿಕೊಂಡು ೧೯೨೬ರ ನವಂಬರ್ ೧೦ರಂದು ವೂಹಾನಿನಲ್ಲಿ ಕೇಂದ್ರ ಸರಕಾರವನ್ನು ಸ್ಥಾಪಿಸಿದರು. ಕಮ್ಯುನಿಸ್ಟ್ ಮತ್ತು ಕೊಮಿಟಾಂಗ್ ಪಕ್ಷಗಳ ಅಧೀನದಲ್ಲಿ ೧ ಕೋಟಿ ಜನ ಸಿದ್ಧವಾಗಿದ್ದರು. ಕ್ಯಾಂಟನ್ ನಗರದಿಂದ ಹೊರಟು ಸರಕಾರದ ಸೈನ್ಯಗಳು ದಕ್ಷಿಣ ಚೀನವನ್ನೆಲ್ಲಾ ಸುತ್ತಿ ಉತ್ತರ ಚೀನದ ಕಡೆ ಹೊರಟುವು. ಇದರಿಂದ ಪಾಳೆಯಗಾರರ ಬೆನ್ನುಮೂಳೆ ಮುರಿದಂತಾಗಿತ್ತು. ದಕ್ಷಿಣ ಚೀನದಲ್ಲೆಲ್ಲಾ ರೈತರು ಹಳ್ಳಿಗಳಲ್ಲಿ ಪಂಚಾಯಿತಿಗಳನ್ನೂ ಸ್ವಪರಿಪೂರ್ಣ ಸರ್ಕಾರಗಳನ್ನೂ ರಚಿಸಿಕೊಂಡಿದ್ದರು. ಈ ಸರ್ಕಾರಗಳಿಗೆ ಅವರು ಕೊಟ್ಟ ಹೆಸರು "ಜನತೆಯ ಶಕ್ತಿ." ಜನತೆಯ ಶಾಲೆಗಳು, ಜನತೆಯ ಆಸ್ಪತ್ರೆಗಳು ಎಲ್ಲೆಲ್ಲಿಯೂ ಕಾಣುತ್ತಿದ್ದುವು. ೧೯೨೭ನೆಯ ಮಾರ್ಚಿಯಲ್ಲಿ ಹ್ಯಾಂಕೋ ಮತ್ತು ಕೂಕಿಯಾಂಗ್ ನಗರಗಳಲ್ಲಿ ಜನಗಳ ಒತ್ತಾಯದ ಫಲವಾಗಿ ವಿದೇಶೀಯರ. ಅದರಲ್ಲಿಯೂ ಮುಖ್ಯವಾಗಿ ಬ್ರಿಟಿಷರ ವಿಶೇಷ ವಸಾಹತುಗಳು ಚೀನಕ್ಕೇ ಹಿಂತಿರುಗಿಸಲ್ಪಟ್ಟುವು. ವಿದೇಶೀಯರ ವಿಶೇಷ ಹಕ್ಕುಗಳು ರದ್ದಾದುವು. ಮಾರ್ಚಿ ೨೨ರಲ್ಲಿ ಷಾಂಗ್ಹೈ ನಗರದ ಸುಸಂಘಟಿತ ಕಾರ್ಮಿಕರು ಕಮ್ಯುನಿಸ್ಟ್ ನಾಯಕ ಚೌ ಎನ್ ಲೈ ಎಂಬುವನ ನಾಯಕತ್ವದಲ್ಲಿ ನಗರವನ್ನು ಬಿಡಿಸಿ ತಮ್ಮ ಅಧೀನಪಡಿಸಿಕೊಂಡರು. ಷಾಂಗ್ಹೈ ಆಕ್ರಮಣದ ನಂತರದ ಚರಿತ್ರೆಯನ್ನು ತಿಳಿಯಲು ಮೊದಲು ಈ ಆಕ್ರಮಣ ನಡೆಸಿದ ಚೀನದ ಕಮ್ಯುನಿಸ್ಟ್ ಪಾರ್ಟಿಯ ಬೆಳವಣಿಗೆಯನ್ನು ಅರಿತುಕೊಳ್ಳುವುದು ಅವಶ್ಯಕ. ಏಕೆಂದರೆ ಇದುವರೆಗೆ ಕೊಮಿಂಟಾಂಗಿನಲ್ಲಿ ಕಮ್ಯುನಿಸ್ಟರೂ

ಕೂಡಿದ್ದುದರಿಂದ ಕೋಮಿಂಟಾಂಗ್ ಪ್ರಗತಿಗಾಮಿಯಾಗಿದ್ದು, ಜನತೆಯ ನಿಜವಾದ ನಾಯಕತ್ವ ವಹಿಸಿತ್ತು. ಆದರೆ ಮುಂದೆ ಆ ನಾಯಕತ್ವ ಭಿನ್ನವಾಗಿ ಕಮ್ಯುನಿಸ್ಟರು ಕೋಮಿಂಟಾಂಗಿನಿಂದ ದೂರೀಕರಿಸಲ್ಪಟ್ಟರು—ದೇಶದಲ್ಲಿ ಎರಡು ಬಣಗಳಾದವು.

೧೯೧೭ ರಲ್ಲಿ ರಷ್ಯದ ಕ್ರಾಂತಿ ಸಫಲವಾಗಿ ರಷ್ಯದಲ್ಲಿ ಜನತಾ ಪ್ರಭುತ್ವ ಸ್ಥಾಪಿತವಾದ ಮೇಲೆ ಜಗತ್ತಿನ ಎಲ್ಲ ಕಡೆಯಲ್ಲಿಯೂ ಕಮ್ಯುನಿಸ್ಟ್ ತತ್ವದ ಅನುಯಾಯಿಗಳು ಹುಟ್ಟಿಕೊಂಡರು. ಸಮತಾವಾದದ ತತ್ವದಲ್ಲಿ ಸಮಾಜದ ಎಲ್ಲಾ ರೋಗರುಜಿನಗಳಿಗೂ ಮದ್ದು ಕಂಡುಕೊಂಡು ಪ್ರಗತಿಗಾಮಿಗಳಾದ ಯುವಕರು ತಮ್ಮ ತಮ್ಮ ನಾಡುಗಳಲ್ಲಿ ಗುಪ್ತವಾಗಿ ಕಮ್ಯುನಿಸ್ಟ್ ಸಂಘಗಳನ್ನು ಸ್ಥಾಪಿಸಿಕೊಳ್ಳಲಾರಂಭಿಸಿದರು. ಚೀನದಲ್ಲಿ ಕೂಡ ಇದೇ ರೀತಿಯಾಯಿತು. ಚೀನದ ರಾಷ್ಟ್ರೀಯ ಕ್ರಾಂತಿಗೆ ಸ್ಫೂರ್ತಿ ದೊರೆತುದು ಕೂಡ ರಷ್ಯದ ಕ್ರಾಂತಿಯಿಂದಲೇ. ೧೯೧೮ ರಲ್ಲಿಯೇ ಚೀನದಲ್ಲಿ ಸಮತಾವಾದೀ ತರುಣರ ಸಂಘ ಸ್ಥಾಪಿತವಾಗಿತ್ತು. ಇದರ ಸ್ಥಾಪನೆಗೆ ಕಾರಣರೆಂದರೆ ಹೊರದೇಶಗಳಲ್ಲಿ ವ್ಯಾಸಂಗ ಮಾಡಿ ಹಿಂತಿರುಗಿದ್ದ ಕೆಲವು ಮಧ್ಯವರ್ಗದ ಬುದ್ಧಿಜೀವಿಗಳು ಮತ್ತು ವಿದ್ಯಾರ್ಥಿಗಳು. ಈ ಸಂಘವು ದಿನೇ ದಿನೇ ಬೆಳೆಯುತ್ತಾ ಬಂದಂತೆ ಇದರ ಕಾರ್ಯರಂಗ ಕೂಡ ವಿಶಾಲವಾಗುತ್ತಾ ಬಂದಿತು. ಎಲ್ಲೆಲ್ಲಿಯೂ ಕಾರ್ಮಿಕರು ಇದಕ್ಕೆ ಸದಸ್ಯರಾದರು. ೧೯೨೦ ನೆಯ ನವಂಬರಿನಲ್ಲಿ ಈ ಸಂಘವು ಕಮ್ಯುನಿಸ್ಟ್ ಅಂತರ ರಾಷ್ಟ್ರೀಯ ಸಂಘವಾದ ಕೋಮಿಂಟರ್ನ್‌ನ ಅಂಗಸಂಸ್ಥೆಯಾಯಿತು. ಅಲ್ಲಿಂದ ಮುಂದೆ ಅದರ ಕಾರ್ಯವೆಲ್ಲವೂ ಕೋಮಿಂಟರ್ನ್‌ನ ಸಲಹೆಯ ಮೇರೆಗೇ ನಡೆಯುತ್ತಿತ್ತು. ೧೯೨೦ ರಲ್ಲಿ ಚೀನದ ಮೊದಲನೆಯ ಕಾರ್ಮಿಕ ಮುಷ್ಕರ ಚಾಂಗ್ಷಾ ನಗರದಲ್ಲಿ ಆರಂಭವಾಯಿತು. ಈಗ ಚೀನದ ಕಮ್ಯುನಿಸ್ಟ್ ಪಾರ್ಟಿಯ ಕಾರ್ಯದರ್ಶಿಯಾಗಿರುವ ಮಾ ತ್ಸೇ ತುಂಗ್ [Mao Tse Tung] ಆಗ ಚಾಂಗ್ಷಾವಿನಲ್ಲಿ ನಾರ್ಮಲ್ ಸ್ಕೂಲಿನಲ್ಲಿ ವ್ಯಾಸಂಗ ಮಾಡುತ್ತಿದ್ದ. ಹುನಾನ್ ಪ್ರಾಂತ್ಯದಲ್ಲಿರುವ ಚಾಂಗ್ಷಾ ಪಟ್ಟಣ ಕಾರ್ಮಿಕ ಮತ್ತು ರೈತಚಳುವಳಿಗೂ, ವಿದ್ಯಾರ್ಥಿ ಚಳುವಳಿಗೂ ಕೇಂದ್ರವಾಗಿತ್ತು. ಮಾ ತ್ಸೇ ತುಂಗನು ೧೯೨೦ ರ ಕಾರ್ಮಿಕ ಚಳುವಳಿಯ ನಾಯಕತ್ವ ವಹಿಸಿದ್ದನು. ಇದಾದ ಮೇಲೆ ಪೀಕಿಂಗ್

ರಾಷ್ಟ್ರೀಯ ವಿಶ್ವವಿದ್ಯಾನಿಲಯದಲ್ಲಿ ಆತ ವ್ಯಾಸಂಗ ಮಾಡುತ್ತಿರುವಾಗ ಲಿ ಟಾ ಚೌ [Li Ta-Chao] ನೊಂದಿಗೆ ಸಹಕರಿಸಿ ೧೯೨೧ರ ಮೇ ತಿಂಗಳಿನಲ್ಲಿ ಚೀನೀ ಕಮ್ಯೂನಿಸ್ಟ್ ಪಾರ್ಟಿಯನ್ನು ಷಾಂಗ್ಹೈನಲ್ಲಿ ಸ್ಥಾಪಿಸಿದನು. ಚೀನೀ ಕಮ್ಯೂನಿಸ್ಟ್ ಪಾರ್ಟಿಯ ಆರಂಭದಲ್ಲಿ ಅದರಲ್ಲಿದ್ದ ಸದಸ್ಯರು ಕೇವಲ ೨೧ ಮಂದಿ ಮಾತ್ರ. ಈ ಸಂಘ ಸ್ಥಾಪನೆಯಾಗುವ ವೇಳೆಗಾಗಲೇ ಡಾ. ಸನ್ ಸೋವಿಯಟ್ ರಷ್ಯದ ಗೆಳೆತನ ಸಂಪಾದಿಸಿದ್ದ. ೧೯೨೩ನೆಯ ಫೆಬ್ರುವರಿ ೭ ರಂದು ಚೀನೀ ಕಮ್ಯೂನಿಸ್ಟ್ ನಾಯಕತ್ವದಲ್ಲಿ ಪಿನ್‌ಹಾವ್ ರೈಲ್ವೆ ಕೆಲಸಗಾರರು ಮುಷ್ಕರ ಹೂಡಿದರು. ಅದೇ ವರ್ಷ ಸುಮಾರು ೨೦,೦೦೦ ಕಾರ್ಮಿಕರು ಭಾಗವಹಿಸಿದ ರೈಲ್ವೆ ಮುಷ್ಕರ ಚೀನದಲ್ಲೆಲ್ಲಾ ಹರಡಿತು. ಎಲ್ಲಾ ಕಡೆಗಳಲ್ಲಿಯೂ ಕಾರ್ಮಿಕ ಸಂಘಗಳೂ, ರೈತಸಂಘಗಳೂ ತಲೆ ಎತ್ತಲಾರಂಭಿಸಿದುವು. ಅದೇ ವರ್ಷ ಮೇ ೧ರಂದು ಕ್ಯಾಂಟನ್ ನಗರದಲ್ಲಿ ಕಾರ್ಮಿಕರ ಮೊದಲನೆಯ ಅಧಿವೇಶನ ಕೂಡಿತು. ಆಗಲೇ ಕಾರ್ಮಿಕ ಸಂಘಗಳ ನಾಯಕತ್ವ ಕಮ್ಯೂನಿಸ್ಟ್ ಪಾರ್ಟಿಯದಾಗಿತ್ತು. ಕಾರ್ಮಿಕರೂ, ರೈತರೂ, ಪ್ರಗತಿಗಾಮಿಗಳಾದ ವಿದ್ಯಾವಂತರೂ, ಮಧ್ಯವರ್ಗದ ಬುದ್ಧಿ ಜೀವಿಗಳೂ, ಪಾರ್ಟಿಯಲ್ಲಿ ಸೇರಿಕೊಂಡರು. ಕೊಮಿಂಟಾಂಗ್‌ನೊಂದಿಗೆ ಕೂಡಿಕೊಳ್ಳಲು ಕಮ್ಯೂನಿಸ್ಟರು ನಿರ್ಧರಿಸಿ ಕೊಮಿಂಟಾಂಗಿನ ಸದಸ್ಯರಾದರು. ಆದರೆ ತಮ್ಮ ಕರ್ತವ್ಯವಾದ ಕಾರ್ಮಿಕರ ಮತ್ತು ರೈತಸಂಘಟನೆಯ ಕೆಲಸ ನಡೆಸುತ್ತಲೇ ಹೋದರು. ಚೀನದಲ್ಲಿ ನಡೆದ ಪ್ರತಿಯೊಂದು ಸಾಮ್ರಾಜ್ಯಶಾಹೀ ವಿರೋಧಿ ಮುಷ್ಕರಕ್ಕೂ ಅವರೇ ಮೂಲಕಾರಣರು! ಕೊಮಿಂಟಾಂಗಿನೊಂದಿಗೆ ೧೯೨೭ ರ ವರೆಗೂ ಜತೆಯಾಗಿಯೇ ಕೆಲಸಮಾಡಿದರು. ಆ ಉತ್ತರ ಚೀನದ ಪಾಳೆಯಗಾರರನ್ನು ವಿನಾಶಗೊಳಿಸಲು ಹೆಚ್ಚಾಗಿ ದುಡಿದವರೂ ಇವರೇ. ' ರಾಷ್ಟ್ರೀಯ ಸೈನ್ಯಗಳು ಷಾಂಗ್ಹೈ ನಗರಕ್ಕೆ ಬರುವ ವೇಳೆಗಾಗಲೇ ಷಾಂಗ್ಹೈ ನಗರದ ಕಾರ್ಮಿಕರು ಚೌ ಎನ್ ಲೈನ ನಾಯಕತ್ವದಲ್ಲಿ ಷಾಂಗ್ಹೈ ನಗರವನ್ನು ಬಿಡುಗಡೆ ಮಾಡಿದ್ದರು.

ಷಾಂಗ್ಹೈ ಪತನವಾದುದು ೧೯೨೭ರ ಮಾರ್ಚಿ ೨೨ರಂದು. ಅಲ್ಲಿ ಆಗಲೇ ಕಮ್ಯೂನಿಸ್ಟರ ನೇತೃತ್ವದಲ್ಲಿ ತಾತ್ಕಾಲಿಕ ಸರ್ಕಾರ ಕೂಡ ಸ್ಥಾಪಿತವಾಗಿದ್ದಿತು. ಈ ವೇಳೆಗೆ ಚಿಯಾಂಗ್ ಕೈಷೇಕ್ ವೂಹಾನ್ ಸರ್ಕಾರದ ಅಧ್ಯಕ್ಷನಾಗಿದ್ದ

ಕೊಮಿಂಟಾಂಗಿನಲ್ಲಿ ಡಾ. ಸನ್‌ನ ನೇತೃತ್ವದಲ್ಲಿ ವಿವಿಧ ವರ್ಗಗಳ ಜನರೆಲ್ಲರೂ ರಾಷ್ಟ್ರೀಯತೆಯ ಧ್ವಜದಡಿಯಲ್ಲಿ ಒಂದುಗೂಡಿದ್ದರು. ಜಮೀನುದಾರರೂ, ರೈತರೂ, ಕಾರ್ಮಿಕರೂ, ಮಧ್ಯವರ್ಗದವರೂ ಎಲ್ಲರೂ ಡಾ. ಸನ್‌ನ ನಾಯಕತ್ವವನ್ನು ಒಪ್ಪಿಕೊಂಡಿದ್ದರು. ಎಂದರೆ ಕೊಮಿಂಟಾಂಗಿನಲ್ಲಿ ಪ್ರಗತಿಗಾಮಿಗಳು ಹೇಗಿದ್ದರೋ ಅದೇ ರೀತಿಯಲ್ಲಿಯೇ ಪ್ರತಿಗಾಮಿಗಳೂ ಇದ್ದರು. ೧೯೨೭ ರಲ್ಲಿ ಎಲ್ಲೆಲ್ಲಿಯೂ ಪ್ರಗತಿಗಾಮಿ ಶಕ್ತಿಗಳು ಜಯ ಹೊಂದುತ್ತಿರುವುದನ್ನು ಕಂಡು ಪ್ರತಿಗಾಮಿಗಳಿಗೆ ತಮ್ಮ ಶಕ್ತಿ ಕುಂದುವುದೆಂಬ ಭೀತಿ ಬಂದಿತು. ಕಾರ್ಮಿಕರೂ ರೈತರೂ ಎಲ್ಲೆಡೆಯಲ್ಲಿಯೂ ವಿಜಯಿಗಳಾದರೆ ತಮ್ಮ ಆಸ್ತಿ, ಭೂಮಿಗಳು ಎಲ್ಲರ ಪಾಲಾಗುತ್ತದೆಂದು ಹೆದರಿ ಅವರೆಲ್ಲರೂ ಕೂಡ ಬೆಳೆಯುತ್ತಿರುವ ಕಾರ್ಮಿಕ ಚಳುವಳಿಯನ್ನು ತುಳಿಯಲು ಯೋಚಿಸಿದರು. ಈಗ ಚೀನದ ನಾಯಕನಾಗಿರುವ ಚಿಯಾಂಗ್ ಕೈಷೇಕ್ ಆ ಗುಂಪಿಗೆ ಸೇರಿದವನು. ಷಾಂಗ್ಹೈ ಕಾರ್ಮಿಕರ ವಶವಾದುದು ಆ ಗುಂಪಿಗೆ ಸಹಿಸಲಿಲ್ಲ. ಡಾ. ಸನ್‌ನ ಮರಣಾ ನಂತರ ಚಿಯಾಂಗ್ ತನ್ನದೇ ದಾರಿ ಹಿಡಿದು ನ್ಯಾನ್‌ಕಿಂಗಿನಲ್ಲಿ ತನ್ನದೇ ಒಂದು ಸರ್ಕಾರವನ್ನು ಸ್ಥಾಪಿಸಿ, ೧೯೨೭ ನೆಯ ಎಪ್ರಿಲ್ ೧೨ ರಂದು ಕಮ್ಯುನಿಸ್ಟ್ ವಿರೋಧಿ ನೀತಿಯನ್ನನುಸರಿಸಲಾರಂಭಿಸಿದನು. ಯಾವ ಕಾರ್ಮಿಕರು ವಿದೇಶೀ ಸಾಮ್ರಾಜ್ಯಶಾಹಿಗಳಿಂದ, ಪಾಳೆಯಗಾರರಿಂದ ಚೀನೀ ರಾಷ್ಟ್ರೀಯ ಸರ್ಕಾರಕ್ಕಾಗಿ ಷಾಂಗ್ಹೈ ನಗರವನ್ನು ಬಿಡುಗಡೆ ಮಾಡಿದ್ದರೋ, ಅವರೆಲ್ಲರನ್ನೂ ದೇಶದ್ರೋಹಿಗಳೆಂದು ಕರೆದು ಅವರ ಮೇಲೆ ಆಘಾತ ನಡೆಸಿದ. ಷಾಂಗ್ಹೈ ನಗರದಲ್ಲಿ ರಕ್ತದ ಹೊಳೆ ಹರಿಯಿತು. ಯಾವ ಕೇಂದ್ರ ಸರ್ಕಾರಕ್ಕಾಗಿ ಹೋರಾಡಿದ್ದರೋ ಆ ಕೇಂದ್ರ ಸರ್ಕಾರವೇ ಕಾರ್ಮಿಕರನ್ನು ಕೊಲೆಮಾಡಿತು. ಈ ಕೊಲೆಗೆ ಮೂರು ಕಾರಣಗಳನ್ನು ಕೊಡಬಹುದು. ೧. ಇದುವರೆಗೂ ನಡೆಯುತ್ತಿದ್ದ ರಾಷ್ಟ್ರೀಯ ಕ್ರಾಂತಿಯಲ್ಲಿ ಜನತೆಯೂ ಮಧ್ಯಮ ವರ್ಗವೂ ಒಂದುಗೂಡಿ ನಡೆದಿದ್ದುವು. ಆದರೆ ಸಹಜವಾಗಿಯೇ ಹುಟ್ಟಿಬಂದ ವರ್ಗ ಕಲಹದ ಫಲವಾಗಿ ನಾಯಕತ್ವಕ್ಕೆ ಜನತಾ ವರ್ಗಕ್ಕೂ ಮಧ್ಯಮ ವರ್ಗಕ್ಕೂ ತಿಕ್ಕಾಟ ಬಂದಿತು. ಉತ್ತರ ಚೀನದ ಮೇಲಿನ ದಂಡಯಾತ್ರೆಯ ಕಾಲದಲ್ಲಿ ಎಲ್ಲೆಲ್ಲಿಯೂ ಜನತಾ ಚಳುವಳಿ ಬೆಳೆದುದೂ, ಜನತೆಯ ಪಕ್ಷವಾದ ಕಮ್ಯು

ನಿಸ್ಟ್ ಪಾರ್ಟಿಯ ನಾಯಕತ್ವ ಎಲ್ಲೆಲ್ಲಿಯೂ ಮೂಡಿದುದು ಚಿಯಾಂಗ್ ಕೈಷೇಕ್ ಮತ್ತು ಇತರ ಬೂರ್ಜ್ವಾ (ಬಂಡವಲ) ನಾಯಕರು ಸಹಿಸಲಿಲ್ಲ. ೨. ವಿದೇಶೀ ಸಾಮ್ರಾಜ್ಯಶಾಹಿಗಳು ಕಮ್ಯುನಿಸ್ಟ್-ಕೊಮಿಂಟಾಂಗ್ ಐಕ್ಯವನ್ನು ಒಡೆಯಲು ಶತಪ್ರಯತ್ನ ನಡೆಸುತ್ತಿದ್ದರು. ಈಗ ಬೂರ್ಜ್ವಾ ಪಂಗಡಕ್ಕೆ ಲಂಚ ಕೊಟ್ಟು, ಹೆದರಿಸಿ ಕಮ್ಯುನಿಸ್ಟ್-ಕೊಮಿಂಟಾಂಗ್ ಐಕ್ಯ ಮುರಿಯಲು ಪ್ರೇರೇಪಿಸಿದರು. ೩. ಚಿಯಾಂಗನು ಷಾಂಘೈ ಪಟ್ಟಣವನ್ನು ಮುಟ್ಟಿದಾಗ ಅಲ್ಲಿ ಆಗಲೇ ಜನತೆಯ ಕೈಯಲ್ಲಿ ಅಧಿಕಾರ ಸೇರಿಹೋಗಿತ್ತು. ಷಾಂಘೈ ರಾಷ್ಟ್ರಪ್ರೇಮಿಗಳೆನ್ನಿಸಿದ ಬಂಡವಲಿಗರ ತೌರುಮನೆ. ಇದರಿಂದ ಎಲ್ಲಿ ತಾವೆಲ್ಲರೂ ನಿರ್ನಾಮವಾಗಿ ಹೋದೇವೋ ಎಂದು ಚಿಯಾಂಗ್ ಕೈಷೇಕ್ ಕಾರ್ಮಿಕರೆಲ್ಲರೂ ಶಸ್ತ್ರಾಸ್ತ್ರಗಳನ್ನು ವರ್ಜಿಸಬೇಕೆಂದು ಅಪ್ಪಣೆ ಮಾಡಿ ಷಾಂಘೈ ಕೊಲೆ ನಡೆಸಿದ.

ಏಕರಂಗದ ಭಿನ್ನತೆಯ ಪ್ರಾರಂಭ ಇದು. ೧೯೨೭ನೆಯ ಮೇ ೨೧ರಂದು ಹುನಾನ್ ಪ್ರಾಂತ್ಯದ ಚಾಂಗ್ಸಾವಿನಲ್ಲಿ ಜನರಲ್ ಸೂ-ಕೆ-ಸಿಯಾಂಗ್ [Hsu ke-Hsiang] ನ ಸೈನ್ಯಗಳು ಷಾಂಘೈನ ಕಾರ್ಮಿಕರ ಕೊಲೆಯಂತೆಯೇ ಚಾಂಗ್ಸಾವಿನ ರೈತರ ಕೊಲೆ ನಡೆಸಿದವು. ರೈತರು ಜಮೀನುಗಳನ್ನು ತಮ್ಮ ವಶಪಡಿಸಿಕೊಂಡು ಬಿಡುವರೆಂಬ ಹೆದರಿಕೆಯೇ ಇದರ ಕಾರಣ. ವಾಂಗ್-ಚಿಂಗ್-ವೈನಂತಹ ಬೂರ್ಜ್ವಾ ನಾಯಕರೂ ಇದಕ್ಕೆ ಮೂಲ. ಈತ ಆಗ ಕೊಮಿಂಟಾಂಗಿನ ಅಧ್ಯಕ್ಷನಾಗಿದ್ದ. ಈಗ ಜಪಾನಿನ ಕೈಗೊಂಬೆ ಸರ್ಕಾರದ ಮಂತ್ರಿ! ಈ ಚಾಂಗ್ಸಾ ಕೊಲೆಯಾಗಲು ಎಂ. ಎನ್. ರಾಯನ ಮೂರ್ಖತನವೂ ಕಾರಣವೆಂದು ಹೇಳುತ್ತಾರೆ. ಹೇಗಾದರೂ ಇರಲಿ—ಕಮ್ಯುನಿಸ್ಟರು ಕೊಮಿಂಟಾಂಗನ್ನು ೧೯೨೭ರ ಜುಲೈ ೧೫ರಂದು ಬಿಟ್ಟು ಬೇರೆಯಾದರು. ಚಿಯಾಂಗನು ನ್ಯಾನ್‌ಕಿಂಗಿನಲ್ಲಿ ಸರ್ಕಾರವನ್ನು ಸ್ಥಾಪಿಸಿ ಅದೇ ಚೀನದ ಸರ್ಕಾರವೆಂದು ಘೋಷಿಸಿದನು. ಕಮ್ಯುನಿಸ್ಟ್ ಪಾರ್ಟಿಯು ನ್ಯಾಯಬಾಹಿರವಾಯಿತು. ಎಲ್ಲಾ ರೀತಿಯ ಕಾರ್ಮಿಕ ಸಂಘಗಳೂ ರೈತಸಂಘಗಳೂ ಮುಟ್ಟುಗೋಲು ಹಾಕಲ್ಪಟ್ಟುವು. ಸಾವಿರಾರು ಮಂದಿ ಕಾರ್ಮಿಕರೂ ರೈತರೂ ಕಮ್ಯುನಿಸ್ಟ್ ಯುವಕರೂ ವಿದ್ಯಾರ್ಥಿಗಳೂ ಗಲ್ಲಿಗೇರಿಸಲ್ಪಟ್ಟರು. ಕೊಮಿಂಟಾಂಗ್ ಇದುವರೆಗೂ

ಡಾ. ಸನ್-ಯಾತ್-ಸೇನನ ಸಹಕಾರ ನೀತಿಯನ್ನು ಅನುಸರಿಸುತ್ತಿದ್ದುದು, ಕೆಲವುಮಂದಿಗಳ ಸ್ವಾರ್ಥದ ಹಿತರಕ್ಷಣೆಗಾಗಿ ಕ್ರಾಂತಿಯ ಹಾದಿ ಬಿಟ್ಟು ಪ್ರತಿ ಕ್ರಾಂತಿಯ ಹಾದಿ ಹಿಡಿಯಿತು.

## ಅಂತರ್ಯುದ್ಧ

ವೂಹಾನ್ ಸರ್ಕಾರದಲ್ಲಿ ಮೊದಲು ಮೊದಲು ಬಹಳ ಮಂದಿ ಮಧ್ಯ ವರ್ಗದವರು ಚಿಯಾಂಗನ ಕಮ್ಯೂನಿಸ್ಟ್ ವಿರೋಧ ಕಾರ್ಯಕ್ರಮವನ್ನು ಒಪ್ಪಲಿಲ್ಲ. ಆದರೆ ಚಿಯಾಂಗ್ ಕೂಡಲೇ ನ್ಯಾನ್‌ಕಿಂಗಿನಲ್ಲಿ ನೂತನ ಸರ್ಕಾರ ಸ್ಥಾಪಿಸಿಕೊಂಡು ಅದೇ ಚೀನದ ನಿಜವಾದ ಸರ್ಕಾರವೆಂದು ಘೋಷಿಸಿದನು. ಕೆಲವು ದಿನಗಳಲ್ಲಿಯೇ ವೂಹಾನ್ ಸರ್ಕಾರದ ಮಧ್ಯವರ್ಗದವರೆಲ್ಲರೂ ಕಮ್ಯೂನಿಸ್ಟ್ ಕೃಷಿಕ ಕ್ರಾಂತಿಯ ಫಲಗಳಿಗೆ ಹೆದರಿ ಚಿಯಾಂಗನೊಂದಿಗೆ ಸೇರಿಕೊಂಡರು.

ಷಾಂಗ್ಹೈನಲ್ಲಿ ಕಾರ್ಮಿಕರ ಕೊಲೆ, ಚಾಂಗ್ಷಾವಿನಲ್ಲಿ ರೈತರ ಕೊಲೆಯಿಂದ ಆರಂಭವಾದ ಕಮ್ಯೂನಿಸ್ಟ್ ವಿರುದ್ಧ ಸಂಗ್ರಾಮ ಹತ್ತು ವರ್ಷಗಳ ಕಾಲ ಜರುಗಿತು. ೧೯೨೭ರಿಂದ ೧೯೩೭ರ ವರೆಗೆ ನಡೆದ ಚೀನದ ಅಂತರ್ಯುದ್ಧದಿಂದ ಆದ ಪರಿಣಾಮಗಳನ್ನು ನಾವು ಗಮನಿಸಬೇಕಾದುದು ಅವಶ್ಯಕ.

ಜುಲೈ ೧೫ರಂದು ಕಮ್ಯೂನಿಸ್ಟರು ಕೋಮಿಂಟಾಂಗಿನಿಂದ ಬೇರ್ಪಡಿಸಲ್ಪಟ್ಟರು. ಎಲ್ಲೆಲ್ಲಿಯೂ ಕಮ್ಯೂನಿಸ್ಟರ ಮೇಲೆ ದಬ್ಬಾಳಿಕೆ ಆರಂಭವಾಯಿತು.

ಚೀನೀ ಕಮ್ಯೂನಿಸ್ಟ್ ಸೈನ್ಯಗಳ ನಾಯಕನಾಗಿರುವ ಚು ಟೇ [Chu Teh] ೧೯೨೭ ನೆಯ ಜನವರಿಯಲ್ಲಿ ನ್ಯಾನ್‌ಚಾಂಗ್ ನಗರದ ಸೈನ್ಯ ಶಿಕ್ಷಣಾಲಯದ ಮುಖ್ಯಾಧಿಕಾರಿಯಾಗಿಯೂ, ನಗರದ ಪೋಲೀಸ್ ಮುಖ್ಯಾಧಿಕಾರಿಯಾಗಿಯೂ ನೇಮಿಸಲ್ಪಟ್ಟಿದ್ದನು. ನ್ಯಾನ್‌ಚಾಂಗಿನ ಸೈನ್ಯಗಳು ಚೀನದಲ್ಲೆಲ್ಲ ಅತಿ ಶ್ರೇಷ್ಠ ಸೈನ್ಯಗಳೆಂದು ಹೆಸರಾಗಿದ್ದುವು. ಅವುಗಳಿಗೆ "ಐರನ್ ಸೈಡ್" [Iron Side] ಎಂದೂ ಹೆಸರಿತ್ತು. ನ್ಯಾನ್‌ಚಾಂಗಿನಲ್ಲಿ ಚುಟೇಯು ಚೌ ಎನ್ ಲೈ, [Chou-En-Lai] ಹೋ ಲುಂಗ್ [Ho Lung] ಸೂ ಟೆ ಲೀ [Hsu Teh Lieh], ಲಿನ್ ಪಿಯಾವೊ [Lin Piao] ಮುಂತಾ

ದವರೊಂದಿಗೆ ಕೂಡಿ ಕೆಲಸ ನಡೆಸುತ್ತಿದ್ದ. ಮಾ ತ್ಸೀ ತುಂಗ್ ಆಗ ನ್ಯಾನ್ ಚಾಂಗಿನಲ್ಲಿರಲಿಲ್ಲ. ಕಮ್ಯುನಿಸ್ಟ್ ಮತ್ತು ಕೊಮಿಂಟಾಂಗ್ ಪಕ್ಷಗಳಿಗೆ ಭೇದ ಒದಗಿ ಬೇರೆಯಾದಾಗ ಚು ಟೇ ಇನ್ನೂ ಪೋಲೀಸ್ ಅಧಿಕಾರಿಯಾಗಿಯೇ ಇದ್ದ. ಆಗಸ್ಟ್ ೧ರ ನ್ಯಾನ್‌ಚಾಂಗ್ ವಿಪ್ಲವದ ವರೆಗೂ ಆತ ಅಧಿಕಾರ ಬಿಟ್ಟುಕೊಡಲಿಲ್ಲ. ಪೋಲೀಸ್ ಮುಖ್ಯಾಧಿಕಾರಿಯಾಗಿದ್ದ ಅವನೇ ನ್ಯಾನ್ ಚಾಂಗ್ ವಿಪ್ಲವದ ನಾಯಕತ್ವ ವಹಿಸಿದ್ದ. ನ್ಯಾನ್‌ಚಾಂಗಿನ ಐರನ್ ಸೈಡ್ಸ್ ಸೈನಿಕರೆಲ್ಲರೂ ತಮ್ಮ ಅಧಿಕಾರಿಯಾಗಿದ್ದ ಚಾಂಗ್ ಫಾಕೊಯಿಯ ವಿರುದ್ಧ ದಂಗೆಯೆದ್ದರು. ಆ ದಂಗೆಯ ನಾಯಕರು ಕಮ್ಯುನಿಸ್ಟರು. ಈ ದಂಗೆಯಲ್ಲಿ ಕೊಮಿಂಟಾಂಗಿನ ೧೧ನೆಯ, ೪ನೆಯ ಮತ್ತು ೨೦ನೆಯ ದಳಗಳೂ ಭಾಗವಹಿಸಿದ್ದುವು. ಆಗಸ್ಟ್ ೧ರ ಈ ನ್ಯಾನ್‌ಚಾಂಗ್ ದಂಗೆಯು ನಡೆದುದು ಕೊಮಿಂಟಾಂಗಿನ ಕಮ್ಯುನಿಸ್ಟ್ ವಿರೋಧಿ ನೀತಿಯನ್ನು ಖಂಡಿಸು ವುದಕ್ಕಾಗಿ. ಫಲವಾಗಿ ಮೊಟ್ಟಮೊದಲ ಬಾರಿ ಕಮ್ಯುನಿಸ್ಟರಿಗೆ ತಮ್ಮ ದೆಂದು ಕರೆದುಕೊಳ್ಳಲು ಸೈನ್ಯ ದೊರೆತಂತಾಯಿತು. ಈ ದಂಗೆಗಳ ವೈಚಿತ್ರ್ಯವೆಂದರೆ ಕೊಮಿಂಟಾಂಗಿನ ಅತಿ ಶ್ರೇಷ್ಠ ಸೈನ್ಯಗಳೆಲ್ಲವೂ ಕಮ್ಯು ನಿಸ್ಟರ ಪಕ್ಷಕ್ಕೆ ಸೇರಿಕೊಂಡುವು. ಚೀನೀ ಕಮ್ಯುನಿಸ್ಟರು ಈ ದಂಗೆಯೆದ್ದ ಸೈನ್ಯಗಳಿಂದ ಮೊದಲನೆಯ ಕೆಂಪುಸೇನೆಯನ್ನು ರಚಿಸಿದರು. ಆಗ ಆ ಸೈನ್ಯಕ್ಕೆ "ರೈತರ ಮತ್ತು ಕಾರ್ಮಿಕರ ಸೈನ್ಯ"ವೆಂದು ಹೆಸರಿತ್ತು. ಚುಟೇ ಇದರ ಮುಖ್ಯ ದಂಡನಾಯಕನಾಗಿದ್ದ. ಇದರಲ್ಲಿ ಸುಮಾರು ೩,೦೦೦ ಸೈನಿಕರಿದ್ದರು.

ಚುಟೇ ತನ್ನ ಸೈನ್ಯದೊಂದಿಗೆ ಟುಂಗ್‌ಕಿಯಾಂಗ್ ಪಟ್ಟಣಕ್ಕೆ ನಡೆದ. ಮೆಯಿ ಪ್ರಾಂತ್ಯದಲ್ಲಿ ಸಾನ್-ಹೋ-ಪಾ ನಗರವನ್ನು ಚುಟೇಯ ಸೈನ್ಯವೂ, ಚೌ ಷಾನ್ ಮತ್ತು ಸ್ವಾಟೌ ನಗರಗಳನ್ನು, ಯೇಟಿಂಗ್ ಮತ್ತು ಹೋಲುಂಗರ ಸೈನ್ಯಗಳೂ ಮುತ್ತಿದುವು. ಆದರೆ ಅವರು ವಿಫಲರಾಗಿ ಹಿಂತಿರುಗಬೇಕಾ ಯಿತು. ಆ ವೇಳೆಗೆ ಅವನ ಸೈನ್ಯದ ಸಂಖ್ಯೆ ೧೨೦೦ಕ್ಕೆ ಇಳಿದುಹೋಗಿತ್ತು.

ಆಗಸ್ಟ್ ೫ರ ದಿನ ವೂಹಾನ್ ಸರ್ಕಾರ ಕಮ್ಯುನಿಸ್ಟ್ ಪಾರ್ಟಿಯನ್ನು ಅಕ್ರಮ ಕೂಟವೆಂದು ಸಾರಿತು. ಕಮ್ಯುನಿಸ್ಟರನ್ನು ಕಂಡಕಂಡಲ್ಲೆಲ್ಲಾ ಬಂಧಿಸಿ ಗಲ್ಲಿಗೇರಿಸಲಾರಂಭಿಸಿತು. ಈ ವಿಷಮ ಪರಿಸ್ಥಿತಿಯಲ್ಲಿ (ಆಗಸ್ಟ್

೭ರಂದು) ಚೀನೀ ಕಮ್ಯೂನಿಸ್ಟ್ ಪಾರ್ಟಿಯ ಕೇಂದ್ರ ಸಮಿತಿಯು ಸಭೆ ಸೇರಿ, ಇದುವರೆಗೂ ಕಾರ್ಯದರ್ಶಿಯಾಗಿದ್ದ ಚೇನ್ ಟು ಸ್ಯೂನನ್ನು ಕಾರ್ಯದರ್ಶಿಯ ಸ್ಥಾನದಿಂದ ಉರುಳಿಸಿ 'ನೂತನ ನೀತಿ'ಯನ್ನು ಅಂಗೀಕರಿಸಿತು. ಎಲ್ಲಾ ಕಡೆಯಲ್ಲಿಯೂ ಕಾರ್ಮಿಕರನ್ನೂ ರೈತರನ್ನೂ ಸಂಘಟಿಸಿ ಸೋವಿಯಟ್‌ಗಳನ್ನು ಸ್ಥಾಪಿಸುವ ನಿರ್ಣಯ ಮಾಡಲ್ಪಟ್ಟಿತು. ಕ್ಯಾಂಟನ್ ಮೊದಲಿನಿಂದಲೂ ಕ್ರಾಂತಿಕಾರಿಯೇ. ಚೀನೀ ರಾಷ್ಟ್ರೀಯತೆಯ ಮಡಿಲು ಕ್ಯಾಂಟನ್. ಎಂತಲೇ ೧೯೨೭ನೆಯ ಆಗಸ್ಟ್ ೧೭ರ ದಿನ ಕ್ಯಾಂಟನ್ ನಗರದ ಗಡಿಪ್ರದೇಶದಲ್ಲಿ ಚೀನದ ಮೊದಲನೆಯ ಸಾಮ್ಯವಾದೀ ಸೋವಿಯಟ್ ಸ್ಥಾಪಿತವಾಯಿತು. ಕಮ್ಯೂನಿಸ್ಟ್ ಪಾರ್ಟಿಯ ನೂತನ ನೀತಿಯ ಪ್ರಥಮ ಪಾದ ಇದು. ಇದು ೧೯೨೮ನೆಯ ಫೆಬ್ರುವರಿಯ ವರೆಗೂ ಉಳಿದಿತ್ತು. ಅದೇ ತಿಂಗಳಲ್ಲಿ ಚಿಯಾಂಗನ ಸೈನ್ಯಗಳಿಗೆ ಸಿಕ್ಕಿ ನುಚ್ಚುನೂರಾಗಿ ಹೋಯಿತು.

ಸೋವಿಯಟ್‌ಗಳನ್ನು ಸ್ಥಾಪಿಸುವ ಕಾರ್ಯಕ್ರಮವನ್ನು ಚೀನೀ ಕಮ್ಯೂನಿಸ್ಟ್ ಪಾರ್ಟಿಯು ಅನುಸರಿಸಿದುದು ಮಾತ್ಸೇ ತುಂಗನ ಪ್ರಭಾವದಿಂದ. ಪಾರ್ಟಿಯ ಕಾರ್ಯದರ್ಶಿಯಾಗಿದ್ದ ಚೇನ್-ಟು-ಸ್ಯೂ ಪಾರ್ಟಿಯನ್ನು ರದ್ದುಗೊಳಿಸಿ ಕೊಮಿಂಟಾಂಗಿಗೆ ಶರಣಾಗತನಾಗಬೇಕೆಂದಿದ್ದ. ಆದರೆ ಮಾತ್ಸೇ ತುಂಗ್ ಮತ್ತು ಉಳಿದ ಕೆಲವರು ಅದನ್ನು ವಿರೋಧಿಸಿದರು. ಕೊಮಿಂಟಾಂಗಿನ ವಿರುದ್ಧ ಎಲ್ಲ ಕಡೆಯೂ ಕ್ರಾಂತಿ ನಡೆಸಿ ಸೋವಿಯಟ್‌ಗಳನ್ನು ಸ್ಥಾಪಿಸಬೇಕೆಂದು ತೀರ್ಮಾನಿಸಿದರು. ಮಾತ್ಸೇ ಕ್ರಾಂತಿಪೂರ್ಣ ಸೈನ್ಯಗಳನ್ನು ಸಂಘಟಿಸುವ ಯೋಜನೆಯನ್ನು ಮುಂದೆ ತಂದನು. ಕಮ್ಯೂನಿಸ್ಟರಲ್ಲಿ ಕೆಲವರು ಆತನನ್ನು ಹಾಸ್ಯಮಾಡಿದರೂ ಆತ ತನ್ನ ಕ್ರಾಂತಿಕಾರೀ ನೀತಿಯನ್ನು ಬಿಡಲಿಲ್ಲ; ನಿರುತ್ಸಾಹಿಯಾಗಲಿಲ್ಲ.

೧೯೨೭ರ ಸೆಪ್ಟಂಬರ್ ೧೭ರಂದು ಹುನಾನ್ ಪ್ರಾಂತ್ಯದಲ್ಲಿ ಮಾತ್ಸೇ ನಾಯಕತ್ವದಲ್ಲಿ 'ಹೇಮಂತ ಋತುವಿನ ದಂಗೆ'ಯಾಯಿತು. ಫಲವಾಗಿ ಈತ ಮೊದಲನೆಯ ರೈತರ ಮತ್ತು ಕಾರ್ಮಿಕರ ಸೈನ್ಯವನ್ನು ಸ್ಥಾಪಿಸಿದನು. ನವಂಬರ್ ತಿಂಗಳಿನಲ್ಲಿ ಹೂನಾನ್ ಪ್ರಾಂತ್ಯದ ಛಾಲಿನ್ ನಗರದಲ್ಲಿ ಸೋವಿಯಟ್ ಸರ್ಕಾರದ ಸ್ಥಾಪನೆಯಾಯಿತು. ಡಿಸೆಂಬರ್ ೧೧ರಂದು ಕ್ಯಾಂಟನ್

ನಗರದ ಕಾರ್ಮಿಕರು ಯೇಲಿಂಗನ ನಾಯಕತ್ವದಲ್ಲಿ ನಗರವನ್ನು ವಶಮಾಡಿಕೊಂಡು ಪ್ರಸಿದ್ಧ ಕ್ಯಾಂಟನ್ ಕಮ್ಯೂನ (ಪಂಚಾಯಿತಿ)ನ್ನು ಸ್ಥಾಪಿಸಿದರು. ಇದರ ಸ್ಥಾಪಕರಲ್ಲಿ ಹೆಚ್ಚಿನವರು ಕೊಮಿಂಟಾಂಗಿನ ವಿಶೇಷ ತರಬೇತಿನ ದಳದವರೇ; ವಾಂಪ್ರೋವ ಸೈನ್ಯ ಶಿಕ್ಷಣಾಲಯದ ವ್ಯೂಚಾಂಗ್ ವಿಭಾಗದಲ್ಲಿ ಶಿಕ್ಷಣ ಪಡೆದವರೇ. '೨೭ರ ಕೊನೆಯಲ್ಲಿ ಚುಟೇ ದಕ್ಷಿಣ ಹುನಾನ್ ಪ್ರಾಂತ್ಯಕ್ಕೆ ಹೋದನು. ಸೈನ್ಯವನ್ನು ೧೨೦೦ರಿಂದ ೨೦೦೦ಕ್ಕೆ ಏರಿಸುವುದೇ ಆತನಿಗೆ ಬಹಳ ಕಷ್ಟವಾಗಿತ್ತು. ಆದರೆ ದಕ್ಷಿಣ ಹುನಾನಿನಲ್ಲಿ '೨೮ ಜನವರಿ ೧ರಂದು ದೊಡ್ಡ ರೈತರ ದಂಗೆ ಎಬ್ಬಿಸಿದ ಮೇಲೆ ಅವನ ಸೈನ್ಯ ೧೦೦೦೦ ಕ್ಕೇರಿತು; ಕಮ್ಯುನಿಸ್ಟರ ಬಲ ಹೆಚ್ಚಿತು.

ಇದಾದ ಮೇಲೆ ಹೇಲೋಫೆಂಗ್‌ನಲ್ಲಿ ಒಂದು ಸೋವಿಯಟ್ ಸರ್ಕಾರ ಸ್ಥಾಪಿತವಾಯಿತು. ಕ್ಯಾಂಟನ್ ಕಮ್ಯುನಿನ ಸ್ಥಾಪನೆಯಲ್ಲಿ ಕಾರ್ಯಕರ್ತರಾಗಿದ್ದ ಕೆಲವರೇ ಇದರ ಕರ್ತರಾಗಿದ್ದರು. ಆದರೆ ಇದು ನಿರ್ನಾಮವಾದಾಗ ಸೈನಿಕರೆಲ್ಲ ನಾಮಾವಶೇಷರಾದರು. ಕ್ಯಾಂಟನ್ ಕಮ್ಯುನ್ ಕೂಡ ೨ ದಿನಗಳು ಮಾತ್ರ ಉಳಿದು ಆ ಮೇಲೆ ಕಾರ್ಮಿಕರ ರಕ್ತದಲ್ಲಿ ಮುಳುಗಿ ಹೋಯಿತು. ಇದರ ಗಡಿಪ್ರದೇಶದಲ್ಲಿದ್ದ ಸೋವಿಯಟ್ ಕೂಡ ನಿರ್ನಾಮವಾಯಿತು.

ಈ ವೇಳೆಯಲ್ಲಿ ಕಮ್ಯುನಿಸ್ಟ್ ಸೈನ್ಯಗಳಿಗೆ 'ಕೆಂಪುಸೇನೆ'ಯ ಬದಲು 'ರೈತರ ಮತ್ತು ಕಾರ್ಮಿಕರ ಸೇನೆ' ಎಂಬ ಹೆಸರೇ ಇತ್ತು. ಇವು ಹುಟ್ಟಿ ಬೆಳೆದುದನ್ನು ನೋಡಿದರೆ ಈ ಹೆಸರು ಏಕೆ ಬಂದಿತೆಂಬುದು ತಿಳಿಯುತ್ತದೆ.

೧೯೨೫ರಲ್ಲಿ ಯೇಟಿಂಗನೇ 'ಐರನ್ ಸೈಡ್' ಸೈನಿಕರ ಸೈನ್ಯದಲ್ಲಿ ಕ್ವಾಟುಂಗ್ ರೈತರಿಗೂ ಎಡೆ ಕೊಟ್ಟಿದ್ದ. ಚುಟೇಯ ನಾಯಕತ್ವದಲ್ಲಿ ಹುನಾನ್‌ನಲ್ಲಿದ್ದ ಈ ಸೈನ್ಯದ ಸಂಖ್ಯೆ ಹತ್ತುಸಾವಿರವಾಯಿತು. ಇದರಲ್ಲಿ ಹಾನ್ಯೆಪಿಂಗ್ ಮತ್ತು ಅನ್ಯ್ಯಾಂಗ್ ನಗರಗಳ ಗಣಿ ಕೆಲಸಗಾರರೂ, ರೈಲ್ವೆ ಕಾರ್ಮಿಕರೂ ಸೇರಿಕೊಂಡರು. ಇದೇ ವರ್ಷ ಹಾನ್ಯೆಪಿಂಗಿನ ಗಣಿಗಳೆಲ್ಲ ಮುಚ್ಚಲ್ಪಟ್ಟಿದ್ದುದರಿಂದ ನಿರುದ್ಯೋಗಿಗಳಾದ ಸುಮಾರು ಒಂದು ಲಕ್ಷ ಕಾರ್ಮಿಕರೂ ಕಮ್ಯುನಿಸ್ಟ್ ನಾಯಕ ಲೀ ಲಿಸಾನ್ [Li Lisan]ನ ಆಶ್ರಯದಲ್ಲಿ ಸೈನ್ಯ ಶಿಕ್ಷಣ ಪಡೆದರು. ಮಾತ್ಸೇ ತುಂಗನ ಮೊದಲನೆಯ ರೈತರ

ಕಾರ್ಮಿಕರ ಸೈನ್ಯದಲ್ಲಿನ ಮೂರು ದಳಗಳ ಪೈಕಿ ಮೊದಲನೆಯದರಲ್ಲಿ ಗಣಿ ಕೆಲಸಗಾರರೂ ಎರಡನೆಯದರಲ್ಲಿ ರೈತರೂ ಮೂರನೆಯದರಲ್ಲಿ ವೂಹಾನ್ ಸೈನ್ಯದಿಂದ ಬಿಟ್ಟು ಬಂದ ಸೈನಿಕರೂ ಕೂಡಿದ್ದರು. ಎಂತಲೇ ಇದನ್ನು ರೈತರ-ಕಾರ್ಮಿಕರ ಸೈನ್ಯಗಳೆಂದು ಕರೆಯುತ್ತಿದ್ದುದು.

ಕ್ಯಾಂಟನ್ ಕಮ್ಯುನಿನ ಕಾರ್ಮಿಕ ಶಕ್ತಿಯನ್ನು ಎದುರಿಸಲು ಕೊಮಿಂಟಾಂಗ್ ಬಹಳ ಪ್ರಯತ್ನ ನಡೆಸಿ ಮೂರು ದಿನಗಳ ಕಾಲ ಹೆಂಗಸರು ಮಕ್ಕಳೆನ್ನದೆ ಕ್ಯಾಂಟನ್ ನಾಗರಿಕರನ್ನು ಕೊಲೆ ಮಾಡಿತು. ಈ ಸಂದರ್ಭದಲ್ಲಿ ಚಿಯಾಂಗ್ ಜಪಾನೀ ಸಾಮ್ರಾಜ್ಯಶಾಹೀ ಸೈನ್ಯಗಳ ಸಹಾಯ ಕೂಡ ಪಡೆದಿದ್ದನು. ಎರಡು ಪಕ್ಷಗಳೊಳಗಣ ಅಂತರ್ಯುದ್ಧ ದಿನೇ ದಿನೇ ಹೆಚ್ಚಲಾರಂಭಿಸಿತು. ಕೊಮಿಂಟಾಂಗಿನ ಶತಪ್ರಯತ್ನಗಳಿಂದಲೂ ನಿರ್ನಾಮವಾಗದೆ ಚೀನೀ ಕಮ್ಯುನಿಸ್ಟರೂ ಅವರ ಸೈನ್ಯಗಳೂ ಸೋವಿಯಟ್‌ಗಳೂ ಬೆಳೆಯಲಾರಂಭಿಸಿದುವು.

೧೯೨೮ರಲ್ಲಿ ಕಮ್ಯುನಿಸ್ಟ್ ಸೈನ್ಯದಲ್ಲಿ ಎರಡು ಶಾಖೆಗಳಿದ್ದುವು. ಮೊದಲನೆಯದು ಚುಟೇಯ ನಾಯಕತ್ವದಲ್ಲಿ ಹುನಾನ್ ಪ್ರಾಂತ್ಯದಲ್ಲಿ. ಎರಡನೆಯದು ಚಿಂಗ್ ಕಾನ್ ಷಾನ್‌ನಲ್ಲಿ ಮಾತ್ಸೇ ತುಂಗನ ನಾಯಕತ್ವದಲ್ಲಿದ್ದ ಸೈನ್ಯ. ಮೇ ತಿಂಗಳಿನಲ್ಲಿ ಚುಟೇ ಮಾತ್ಸೇ ತುಂಗನೊಂದಿಗೆ ಸೇರಿಕೊಂಡನು. ಇಬ್ಬರ ಸೈನ್ಯಗಳೂ ಸೇರಿ ಒಂದೇ ಒಂದು ಹೊಸ ಸೈನ್ಯವಾಗಿ ಮಾರ್ಪಟ್ಟಿತು. ಇದಕ್ಕೆ ನಾಲ್ಕನೆಯ ಕೆಂಪುಸೇನೆಯೆಂದು ಹೆಸರು ಕೊಟ್ಟರು. ಚುಟೇ ಅದರ ದಂಡನಾಯಕನಾಗಿಯೂ ಮಾತ್ಸೇ ತುಂಗ್ ರಾಜಕೀಯ ಪ್ರತಿನಿಧಿಯಾಗಿಯೂ ಜೊತೆಯಾಗಿ ಕಾರ್ಯ ನಡೆಸಲಾರಂಭಿಸಿದರು. ಚಿಂಗ್ ಕಾನ್ ಷಾನ್‌ನಲ್ಲಿ ಅವರ ಮೇಲೆ ಮೂರು ಬಾರಿ ಧಾಳಿ ನಡೆಯಿತು. ಈ ಮೂರು ಬಾರಿಯೂ ಇವರ ಸೈನ್ಯಗಳು ಧಾಳಿಗಾರರನ್ನು ಹಿಮ್ಮೆಟ್ಟಿಸಿದುವು. ಹುನಾನ್, ಕಿಯಾಂಗ್ಸಿ ಮತ್ತು ಕ್ವಾಂಟುಂಗ್ ಪ್ರಾಂತ್ಯಗಳ ಪಾಳೆಯಗಾರರು ಮೊದಲು ಧಾಳಿ ನಡೆಸಿದರು. ಇದರ ಮುಂದಾಳುತನ ವಹಿಸಿದ ಕಿಯಾಂಗ್ಸಿ ಸೇನೆಯೇ ಸೋತುಹೋಗಲು ಉಳಿದೆರಡೂ ಪಲಾಯನ ಮಾಡಿದುವು.

ಚೂಪೈಟನ ನಾಯಕತ್ವದಲ್ಲಿ ಎರಡನೇ ಬಾರಿ ಧಾಳಿ ನಡೆಯಿತು.

ಕೆಂಪುಸೇನೆಗಳು ಎಲ್ಲ ಶಕ್ತಿಯನ್ನೂ ಒಗ್ಗೂಡಿಸಿ ಈ ಧಾಳಿಯನ್ನು ಎದುರಿಸಿ ಹಿಮ್ಮೆಟ್ಟಿಸಿದವು

ಮೂರನೆಯ ಧಾಳಿ ನಡೆದುದು ೧೯೩೦ನೆಯ ಜುಲೈನಲ್ಲಿ. ಈ ಧಾಳಿ ನಡೆದಾಗ ಕೊಮಿಂಟಾಂಗ್ ಸೈನ್ಯಗಳಲ್ಲಿಯೇ ಅಸಾಧ್ಯ ಅಸ್ವೈಕ್ಯವಿದ್ದಿತು. ಸೈನ್ಯದಲ್ಲಿ ಅನೇಕ ಕಮ್ಯುನಿಸ್ಟರೂ, ಕಮ್ಯುನಿಸ್ಟ್ ಪಕ್ಷಪಾತಿಗಳೂ ಇದ್ದರು. ಪಿಂಕಿಯಾಂಗ್ ದಂಗೆ ನಡೆದುದು ಆಗಲೇ. ಹುನಾನ್ ಪ್ರಾಂತ್ಯದ ಪಿಂಕಿಯಾಂಗ್ ನಗರದಲ್ಲಿ ಕೊಮಿಂಟಾಂಗ್ ಸೈನ್ಯಗಳ ಶಿಬಿರವಿತ್ತು. ಆ ಸೈನ್ಯಗಳ ದಂಡನಾಯಕನಾದ ಪೆಂಗ್ ಟೇಹ್ವಾ ಕೊಮಿಂಟಾಂಗಿನ ವಿರುದ್ಧ ದಂಗೆಯೆದ್ದು ತನ್ನ ಸಂಪೂರ್ಣ ಸೈನ್ಯದೊಂದಿಗೆ ಕೆಂಪುಸೇನೆಯೊಂದಿಗೆ ಕೂಡಿಕೊಂಡನು. ಅವನ ಸೈನ್ಯಕ್ಕೆ ೫ನೆಯ ಕೆಂಪುಸೇನೆಯೆಂದು ಹೆಸರಿಡಲಾಯಿತು.

ಈ ಮೂರನೆಯ ಧಾಳಿ ಕಳೆದ ಮೇಲೆ ಕೆಂಪುಸೇನೆಗಳು ಚೆಂಗ ಚಾ ನಗರವನ್ನು ಆಕ್ರಮಿಸಿ, ಅಲ್ಲಿಂದ ಲಿಂಗ್ಸಿಯೆನ್ ಮತ್ತು ಅನ್ಸಾಲಿನ್ ನಗರಗಳನ್ನು ಮುತ್ತಿದುವು. ಕೊಮಿಂಟಾಂಗ್ ಕಮ್ಯೂನಿಸ್ಟ್ ಪ್ರಾಂತ್ಯವನ್ನು ಸುತ್ತುಗಟ್ಟಿ ಬಾಹ್ಯ ಪ್ರಪಂಚದ ಸಂಬಂಧ ಕಡಿದು ಹಾಕುವ ಯೋಜನೆ ನಡೆಸಿತು. ಸುತ್ತಲೂ ಸೈನಿಕರಿಂದ ತುಂಬಿದ ಮನೆಗಳನ್ನು ಕಟ್ಟಿಸಿ ಕಾವಲು ನಡೆಸುವ ತನ್ನ 'ಅಡ್ಡಮನೆಯ ನೀತಿ'ಯನ್ನು ಆರ್ಥಿಕ ಸಂದಿಗ್ಧತೆಯನ್ನು ತಂದೊಡ್ಡುವ ಯತ್ನವನ್ನು ಪ್ರಾರಂಭಿಸಿತು. ಕೆಂಪುಸೇನೆಗಳಿಂದ ಆಕ್ರಮಿತ ಪ್ರದೇಶಗಳ ಸುತ್ತಲೂ ಕೊಮಿಂಟಾಂಗ್ ಸೈನಿಕರು ಸಿಮೆಂಟಿನ ಮನೆಗಳನ್ನು ಕಟ್ಟಿಬಿಡುತ್ತಿದ್ದರು. ಮತ್ತು ಒಳಕ್ಕೆ ಆಹಾರ ಪದಾರ್ಥಗಳು ಸಾಗದಂತೆ ಅಡ್ಡಹಾಕುತ್ತಿದ್ದರು. ಇದರಿಂದ ಆರ್ಥಿಕವಾಗಿ ಕೆಂಪುಸೇನೆಗಳು ಬಲ ಕುಗ್ಗಿ ನಶಿಸುವ ಸ್ಥಿತಿಯೊದಗುತ್ತಿತ್ತು. ಕೆಂಪುಸೇನೆ ಬಹಳ ಇಕ್ಕಟ್ಟಿಗೆ ಸಿಕ್ಕಿಕೊಂಡಿತು. ಕೊನೆಗೆ ಬೆಟ್ಟದ ಮೇಲಿನ ತಮ್ಮ ನೆಲೆಯನ್ನು ಕಾಪಾಡುವ ಕಾರ್ಯವನ್ನು ಪೆಂಗ್ ಟೇಹ್ವಾನ ೫ನೆಯ ಕೆಂಪುಸೇನೆಗೆ ಬಿಟ್ಟು ಚುಟೇ ಮತ್ತು ಮಾತ್ಸೇತುಂಗರು ಕೆಳಗಿಳಿದರು.

ಶತ್ರುಗಳ ಅಡ್ಡಕಟ್ಟೆಯನ್ನು ಒಡೆದು ಹೆಜ್ಜೆಹೆಜ್ಜೆಗೂ ಯುದ್ಧ ಮಾಡುತ್ತಾ ಕಿಯಾಂಗ್ಸಿ ಪ್ರಾಂತ್ಯಕ್ಕೆ ಚುಟೇ ಮತ್ತು ಮಾತ್ಸೇ ಬಂದು ಸೇರಿ

ದರು. ಆ ವಿಷಮ ಸನ್ನಿವೇಶದಲ್ಲಿ ಕಾದಾಟದ ಪ್ರಖರತೆಯ ಪರಿಣಾಮ ವಾಗಿ ಕೆಂಪುಸೇನೆಯ ಸಂಖ್ಯೆ ಬಹಳ ಇಳಿದುಹೋಗಿತ್ತು. ಆದರೆ ಚಿಂಗ್ ಕಾನ್‌ಷಾನಿನ ಸ್ಫೂರ್ತಿಯಿಂದ ಅಲ್ಲಿನ ಸುತ್ತುಮುತ್ತಲಿನ ಪ್ರದೇಶಗಳೆಲ್ಲಾ ಸೋವಿಯಟ್ ಭೂಮಿಗಳಾಗಿ ಮಾರ್ಪಟ್ಟಿದ್ದುವು. ಲಿಂಗ್ಸಿಯನ್, ತ್ಸಾಲಿನ್, ಸೂಚುವಾನ್, ಲೀನ್ ಹ್ಸಿಗಳೆಲ್ಲ ಆಗಲೇ ಸೋವಿಯಟ್‌ಗಳಾಗಿದ್ದುದು ಕೆಂಪು ಸೇನೆಗಳಿಗೆ ಸ್ವಲ್ಪ ಸಹಾಯವಾಯಿತು.

ಚಿಂಗ್‌ಕಾನ್‌ಷಾನಿನಿಂದ ಕಿಯಾಂಗ್ಸಿ ಮತ್ತು ಪಶ್ಚಿಮ ಫೂಕೈನ್ ಪ್ರಾಂತ್ಯಗಳಿಗೆ ೪ನೆಯ ಕೆಂಪು ಸೇನೆ ನಡೆದಂತೆ ಕೊಮಿಟಾಂಗಿನವರು ಕಿಯಾಂಗ್ಸಿ, ಫೂಕೈನ್, ಕ್ವಾಂಟುಂಗ್ ಮತ್ತು ಹುನಾನ್ ಪ್ರಾಂತ್ಯಗಳ ಸೈನ್ಯಗಳನ್ನೆಲ್ಲಾ ಅವರ ಬೆನ್ನಟ್ಟಲು ಕಳುಹಿಸಿದರು. ಕೆಂಪು ಸೇನೆ ಕಿರಿದು ಶತ್ರುಗಳ ಸಂಖ್ಯೆ ಅಗಾಧ ಅಲ್ಲದೆ ಆಗಲೇ ಕಮ್ಯೂನಿಸ್ಟರ ಸೇನೆ ಯುದ್ಧ ಮಾಡಿ ಕರಗಿತ್ತು. ಅದಕ್ಕಾಗಿಯೇ ಹೊಸ ಯುದ್ಧ ವಿಧಾನವನ್ನು ೪ನೆಯ ಕೆಂಪು ಸೇನೆಯು ಅನುಸರಿಸಲಾರಂಭಿಸಿತು. ಎದುರಿಗೆ ಯುದ್ಧಕ್ಕೆ ನಿಲ್ಲದೆ ಕಿರುಕುಳ ಯುದ್ಧ ಮಾಡುತ್ತಾ ಕೊಮಿಂಟಾಂಗ್ ಸೈನ್ಯಗಳನ್ನು ಸೋಲಿಸುತ್ತಾ ಮುನ್ನಡೆಯಿತು. ಫೂಕೈನ್ ಪ್ರಾಂತ್ಯದ ಟಿಂಗ್ಚಾ ನಗರವನ್ನು ವಶಪಡಿಸಿಕೊಂಡಾಗ ಅಲ್ಲಿಯ ಸ್ವಯಂಸೇವಕರಿಂದ ೨೪ನೆಯ ದಳವನ್ನು ಏರ್ಪಡಿಸಿದರು. ಆ ಕಾಲದಲ್ಲಿ ಕೊಮಿಂಟಾಂಗ್ ಸೈನ್ಯಗಳಲ್ಲಿಯೇ ಅನೈಕ್ಯದಿಂದ ಅಂತಃಕಲಹಗಳು ಹೆಚ್ಚಾಗಿ ಎಪ್ರಿಲ್ ಮತ್ತು ಮೇ ೧೯೨೯ರಲ್ಲಿ ಕೆಂಪುಸೇನೆಗೆ ಸೈನ್ಯವನ್ನು ಪುನರ್ವ್ಯವಸ್ಥೆಗೊಳಿಸಿಕೊಳ್ಳಲು ಅವಕಾಶ ಸಿಕ್ಕಿತು.

ಪೆಂಗ್ ಟೇಹ್ವಾನ ೫ನೆಯ ಕೆಂಪುಸೇನೆಯು ಒಂದು ಬಾರಿ ಕೊಮಿಂಟಾಂಗಿನ ಸೈನ್ಯಗಳಿಗೆ ಸೋತು ಟಿಂಗ್ಚಾ ಮತ್ತು ಜ್ಯೂಕಿನ್ ನಗರಗಳ ನಡುವೆ ೪ನೆಯ ಕೆಂಪುಸೇನೆಯನ್ನು ಕೂಡಿಕೊಂಡಿತು. ಆಗಾಗಲೇ ಚೀನದ ಕಮ್ಯೂನಿಸ್ಟ್ ಪಾರ್ಟಿಯ ಕೇಂದ್ರ ಸಮಿತಿಯು ಸೋವಿಯಟ್‌ಗಳನ್ನು ಸ್ಥಾಪಿಸುವ ಕಾರ್ಯವನ್ನು ತೆಗೆದುಕೊಳ್ಳಲು ನಿರ್ಣಯಿಸಿತ್ತು. ಪಶ್ಚಿಮ ಫೂಕೈನ್, ದಕ್ಷಿಣ ಕಿಯಾಂಗ್ಸಿ ಮತ್ತು ಕ್ವಾಂಟುಂಗ್ ಪ್ರಾಂತ್ಯದ ಟುಂಕಿಯಾಂಗ್ ಜಿಲ್ಲೆಗಳನ್ನು ಮೊದಲು ಸೋವಿಯಟ್ ಪ್ರದೇಶಗಳನ್ನಾಗಿಸಬೇಕೆಂದೂ ತೀರ್ಮಾನವಾಯಿತು.

೧೯೨೯ರಲ್ಲಿ ಎಲ್ಲೆಲ್ಲಿಯೂ ಸೋವಿಯಟ್‌ಗಳು ಬೆಳೆಯಲಾರಂಭವಾದುವು. ಎಲ್ಲ ಕಡೆಗಳಲ್ಲಿಯೂ ಅವುಗಳು ಹರಡಿದುದನ್ನು ಕಂಡು ಕೊಮಿಂಟಾಂಗ್ ಮತ್ತೊಂದು ಬಾರಿ ದಾಳಿ ಆರಂಭಿಸಿತು. ಫ್ಯೂಕೈನ್, ಕಿಯಾಂಗ್ಸಿ ಮತ್ತು ಕ್ವಾಂಟುಂಗ್ ಸೈನ್ಯಗಳೆಲ್ಲ ಈ ಬಾರಿ ಧಾಳಿಯಲ್ಲಿ ಭಾಗವಹಿಸಿದುವು. ಫ್ಯೂಕೈನ್ ಸೈನ್ಯ ಅಷ್ಟಾಗಿ ಬಲಶಾಲಿಯಲ್ಲದುದರಿಂದ ಮೊದಲು ಕೆಂಪುಸೇನೆಗಳು ಅದನ್ನೇ ಎದುರಿಸಿ ಸೋಲಿಸಿ ಟುಂಕಿಯಾಂಗ್ ಜಿಲ್ಲೆ [ಕ್ವಾಂಟುಂಗ್ ಪ್ರಾಂತ್ಯದಲ್ಲಿ] ಯನ್ನು ಮುತ್ತಿದವು. ಆದರೆ ಅಲ್ಲಿದ್ದ ಚುಪ್ಟೈಟನ ಸೈನ್ಯ ಬಲಯುತವಾಗಿತ್ತು. ಯಾರಿಗೂ ಸೋಲಾಗಲೀ, ಗೆಲುಹಾಗಲೀ ಆಗಲಿಲ್ಲ. ಕೆಂಪುಸೇನೆಗಳು ಮೇಹ್ಸೆನ್ ಪಟ್ಟಣವನ್ನು ಆಕ್ರಮಿಸಿ, ಪಶ್ಚಿಮಕ್ಕೆ ತಿರುಗಿ ಕಿಯಾಂಗ್ಸಿಯಿಂದ ಹಳೆಯ ಸೋವಿಯಟ್ ಜಿಲ್ಲೆಯಾದ ಫ್ಯೂಕೈನ್‌ಗೆ ಹಿಂತಿರುಗಿದುವು.

೧೯೨೯ರಲ್ಲಿ ಕೆಂಪುಸೇನೆಗಳು ಪಿಂಗ್ಕ್ಸ್ಟಿ ನಗರವನ್ನು ಬಿಟ್ಟು ಶೀಚೆನ್, ಕ್ವಾಂಗ್‌ಚಾಂಗ್‌ಗಳ ಮೂಲಕ ೧೯೩೦ರ ಪ್ರಾರಂಭದಲ್ಲಿ ಚಿಯಾನ್ ನಗರಕ್ಕೆ ತೆರಳಿದುವು. ಇಲ್ಲೆಲ್ಲಾ ಸೋವಿಯಟ್ ಪ್ರಭಾವ ಪಸರಿಸಿದ್ದರಿಂದ ೩ನೆಯ ಕೆಂಪುಸೇನೆಯನ್ನು ಸ್ಥಾಪಿಸಲು ಅವಕಾಶವಾಯಿತು. ಇದರಲ್ಲಿ ಕೊಮಿಂಟಾಂಗ್ ಸೈನ್ಯದಿಂದ ಬಂದವರೇ ಹೆಚ್ಚು ಮಂದಿ. ಈ ಕಾಲದಲ್ಲಿಯೇ ಲೀ ಲಿಸಾನ್ ನೀತಿಯನ್ನು ಕಮ್ಯುನಿಸ್ಟ್ ಪಾರ್ಟಿಯು ಅನುಸರಿಸಲಾರಂಭಿಸಿದುದು. ಈ ನೀತಿಯಂತೆ ಕಮ್ಯುನಿಸ್ಟರು ಹಳ್ಳಿಗಳನ್ನು ಆಕ್ರಮಿಸುವುದು ಬಿಟ್ಟು ದೊಡ್ಡ ದೊಡ್ಡ ನಗರಗಳನ್ನು ಮುತ್ತಿ ಆಕ್ರಮಿಸಿಕೊಳ್ಳಬೇಕಾಗಿತ್ತು. ಲೀ ಲಿಸಾನನ ಈ ನೀತಿ ಕೆಂಪುಸೇನೆಗಳ ಮತ್ತು ಕಮ್ಯುನಿಸ್ಟ್ ಪಾರ್ಟಿಯ ಬೆಳವಣಿಗೆಗೇ ಪೆಟ್ಟು ಕೊಟ್ಟಿತು.

ಲೀ ಲಿಸಾನ್ ನೀತಿಯನ್ನು ಅನುಸರಿಸುವುದಕ್ಕಾಗಿ ೩ನೆಯ, ೪ನೆಯ ಮತ್ತು ೧೨ನೆಯ ಸೇನೆಗಳನ್ನು ಒಂದೇ ಸೈನ್ಯವನ್ನಾಗಿಸಿ ಮಹಾ ನಾಯಕತ್ವವನ್ನು ಚುಟೇ ವಹಿಸಿಕೊಂಡನು. ೪ನೆಯ ದಳದ ನಾಯಕತ್ವ ಲಿನ್ ಪಿಓನದೂ, ೧೨ನೆಯ ದಳದ ನಾಯಕತ್ವ, ಕೊಮಿಂಟಾಂಗನ್ನು ಬಿಟ್ಟು ಕೆಂಪು ಸೇನೆ ಸೇರಿಕೊಂಡ ಲೋ ಪಿಂಗ್ ಹೂನದೂ ಆಗಿತ್ತು.

೧೯೩೦ನೆಯ ಆಗಸ್ಟ್ ತಿಂಗಳಿನಲ್ಲಿ ಸ್ಯಾನ್‌ಚಾಂಗ್ ಪಟ್ಟಣವನ್ನು

ಮುತ್ತಿದರು. ಅದರ ಸುತ್ತಮುತ್ತಿನ ಕಿಯಾಂಗ್ಸಿ ಪ್ರಾಂತ್ಯದ ಹಳ್ಳಿಗಳ ರೈತರನ್ನೆಲ್ಲಾ ಸಂಘಟಿಸಿದರು. ಆಗ ಕೆಂಪುಸೇನೆಯ ಸಂಖ್ಯೆ ಹೆಚ್ಚಿತು. ಸೋವಿಯಟ್ ಪ್ರದೇಶವೂ ವಿಸ್ತಾರವಾಯಿತು ಮತ್ತು ಕೆಂಪುಸೇನೆಗಳಿಗೆ ಸಾಕಷ್ಟು ಹಣ ಸಹಾಯವೂ ಒದಗಿತು.

ಈ ವೇಳೆಗೆ ಪೆಂಗ್ ಟೇಹ್ವಾ ಜುಲೈ ೨೭ರಂದೇ ಹುನಾನಿನ ರಾಜಧಾನಿ ಚಾಂಗ್ಶಾವನ್ನು ಆಕ್ರಮಿಸಿದ್ದವನು ಸಹಾಯಕ್ಕಾಗಿ ಕಾದು ಕಾದು ಸಿಗದೆ ಕೊನೆಗೆ ಪಟ್ಟಣವನ್ನು ಬಿಟ್ಟುಕೊಟ್ಟು ಬರಬೇಕಾಯಿತು. ಆಗ ಒಬ್ಬರಿ ಗೊಬ್ಬರಿಗೆ ಸಂಪರ್ಕವಿಟ್ಟುಕೊಳ್ಳಲು ರೇಡಿಯೋಗಳೇ ಇರಲಿಲ್ಲ. ಚುಟೇಯ ಸೈನ್ಯಗಳೂ ಪೆಂಗ್ ಟೇಹ್ವಾನ ಸೈನ್ಯಗಳೂ ಜೊತೆಗೂಡಿ ಲನೆಯ ಕೆಂಪು ಸೇನೆಯಾದುವು. ಈ ಮಹಾ ಸೇನೆ ಹುನಾನ್ ಸೈನ್ಯದ ನಾಲ್ಕು ದಳಗಳನ್ನು ಅಳಿಸಿ, ಕೆಲವು ಸಾವಿರ ಬಂದೂಕುಗಳನ್ನು ತನ್ನ ವಶಪಡಿಸಿಕೊಂಡಿತು. ಚಾಂಗ್ಶಾವನ್ನು ಮತ್ತೊಮ್ಮೆ ಮುತ್ತಿ ವಿಫಲವಾಗಿ ಕಿಂಗ್ಸಿಯಾಂಗ್ ನಗರಕ್ಕೆ ಕೆಂಪುಸೇನೆ ಹಿಂದಿರುಗಿತು. ಆಗಲೇ ಮೊದಲನೆಯ ಮತ್ತು ಮೂರನೆಯ ಕೆಂಪುಸೇನಾ ದಳಗಳನ್ನು ಕೂಡಿಸಿ ಮೊದಲನೆಯ ಮುನ್ನೆಲೆಯ ಕೆಂಪುಸೇನೆ ಯನ್ನು ಸ್ಥಾಪಿಸಿದರು. ಚುಟೇ ಅದರ ಮಹಾ ದಂಡನಾಯಕನಾಗಿಯೂ ಮಾತ್ಸೇ ತುಂಗ್ ರಾಜಕೀಯ ಸಲಹೆಗಾರನಾಗಿಯೂ ಚುನಾಯಿತರಾದರು.

೧೯೩೦ನೆಯ ಸೆಪ್ಟೆಂಬರಿನಲ್ಲಿ ಕೆಂಪುಸೇನೆ ಲೀಲಿಂಗ್ ಮತ್ತು ಪಿಂಗ್ ಸಿಯಾಂಗ್‌ಗಳಿಗೆ ಹಿಂತಿರುಗಿ ಯಿಚ್ವೊನ್ ನಗರವನ್ನು ಆಕ್ರಮಿಸಿತು. ಲೀ ಲಿಸಾನ್ ಮತ್ತೆ ದೊಡ್ಡ ನಗರಗಳನ್ನು ಮುತ್ತುವ ಸಲಹೆ ಕೊಟ್ಟನು. ಹ್ಯಾಂಕೊ, ಯೋಚೌ, ಚೊೀಘಾಂಗ್ ಮುಂತಾದ ದೊಡ್ಡ ನಗರಗಳನ್ನು ಆಕ್ರಮಿಸುವುದೇ ಅವನ ಯೋಜನೆ. ಆದರೆ ದೊಡ್ಡ ನಗರಗಳನ್ನು ಆಕ್ರಮಿ ಸಲು ಪ್ರಯತ್ನಿಸಿ ಸಾಕಷ್ಟು ಪೆಟ್ಟು ತಿಂದಿದ್ದ ಚುಟೇ ಮತ್ತು ಮಾತ್ಸೇ ತುಂಗರು ಆ ಯೋಜನೆಯನ್ನು ವಿರೋಧಿಸಿ ಜಯಶೀಲರಾದರು. ಕೆಂಪು ಸೇನೆಯಲ್ಲಿ ಆಗಲೇ ಸುಮಾರು ೬೬೦೦೦ ಯೋಧರಿದ್ದರೆಂದು ಕೊಮಿಂಟಾಂಗಿ ನವರೇ ಒಪ್ಪಿಕೊಳ್ಳುತ್ತಾರೆ. ಕೆಂಪುಸೇನೆಯ ಖಜಾನೆಯಲ್ಲಿ ೩೦ ಲಕ್ಷಡಾಲರು ಗಳಷ್ಟು ಹಣ ಕೂಡ ಶೇಖರವಾಗಿತ್ತು. ಈ ಹಣವೇ ಕೊಮಿಂಟಾಂಗಿನ ಮೊದಲನೆಯ ಧಾಳಿಯನ್ನೆದುರಿಸಲು ಕೆಂಪುಸೇನೆಗೆ ಸಹಕಾರಿಯಾದುದು.

ಚಿಯಾಂಗನ ಸೈನ್ಯಗಳು ಇದುವರೆಗೂ ಉತ್ತರ ಚೀನದಲ್ಲಿ ಪಾಳೆಯಗಾರರನ್ನು ಎದುರಿಸುವುದರಲ್ಲಿಯೇ ಮಗ್ನವಾಗಿದ್ದುವು. ೧೯೩೦ ನೆಯ ಅಕ್ಟೋಬರಿನ ವೇಳೆಗೆ ಈ ಉತ್ತರ ದಂಡಯಾತ್ರೆ ಸಂಪೂರ್ಣವಾಗಿತ್ತು. ಈಗ ಚಿಯಾಂಗ್-ಕೈ-ಷೇಕ್ ಮತ್ತು ಕೇಂದ್ರ ಸರ್ಕಾರಗಳಿಗೆ ಕಮ್ಯುನಿಸ್ಟ ನಿರ್ನಾಮ ಮಾಡಲು ಧಾಳಿಗಳನ್ನಾರಂಭಿಸಲು ಅವಕಾಶ ಸಿಕ್ಕಿತು. ಇದೂ ಅಲ್ಲದೆ ಚಿಯಾಂಗನಿಗೆ ವಿದೇಶೀ ಸಾಮ್ರಾಜ್ಯಶಾಹಿಗಳಿಂದ ಕಮ್ಯುನಿಸ್ಟರನ್ನು ತುಳಿಯಲು ಒತ್ತಾಯ ಬೇರೆ. ಚೀನದಲ್ಲಿ ಕಮ್ಯುನಿಸ್ಟರು ಪ್ರಬಲರಾಗಿ ಹೋದರೆ ಮತ್ತು ಕಮ್ಯುನಿಸ್ಟ್ ಸೋವಿಯಟ್ ಸ್ಥಾಪನೆಯಾದರೆ ಜಪಾನಿಗೂ, ಇಂಡೋ ಚೀನಕ್ಕೂ, ಭಾರತಕ್ಕೂ ಖಂಡಿತವಾಗಿ ಈ ತತ್ವ ಹರಡುವುದು; ಅದರಿಂದ ಆ ರಾಜ್ಯಗಳನ್ನು ಪೋಷಿಸುತ್ತಿರುವ ಜಪಾನೀ ಫಾಸಿಸ್ಟರಿಗೂ, ಫ್ರೆಂಚ್ ನೌಕರಶಾಹಿಗೂ, ಬ್ರಿಟಿಷ್ ಸಾಮ್ರಾಜ್ಯಶಾಹಿಗೂ ವಿಪತ್ತೊದಗಿದಂತಾಗುತ್ತದೆ. ಆದುದರಿಂದ ಯಾವುದಾದರೊಂದು ರೀತಿಯಲ್ಲಿ ಇವರನ್ನು ಸದೆಬಡಿಯುವುದೇ ವಿದೇಶೀಯರ ಉದ್ದೇಶವಾಗಿತ್ತು: ಅದಕ್ಕಾಗಿ ಚಿಯಾಂಗನಿಗೆ ಬೆಂಬಲ ಕೊಡಲಾರಂಭಿಸಿದರು. ಈ ಯುದ್ಧಗಳಲ್ಲಿ ಜಪಾನಿಯರಿಂದ ಕೂಡ ಚಿಯಾಂಗ್ ಸಹಾಯ ಪಡೆದ. ಈ ಯುದ್ಧಕ್ಕಾಗಿ ಕೊಮಿಂಟಾಂಗ್ ಸೈನ್ಯಗಳಿಗೆ ಶಿಕ್ಷಣ ಕೊಟ್ಟವನು ಸೀಕ್ಟ್ ಎಂಬ ಜರ್ಮನ್ ಸೇನಾನಿ. ಚೀನೀ ಸೈನ್ಯಗಳನ್ನು ನಡೆಸಿದವರು ಕೆಂಪುಸೇನೆಯ ಶಕ್ತಿಯನ್ನರಿಯದ ೭೦-೮೦ ಮಂದಿ ಜರ್ಮನ್ ನಾಯಕರು. ಆದರೆ ಕೆಂಪುಸೇನೆಗೆ ಹೋದಲ್ಲಿ ಜನ ಸಹಾಯ ಸಿಗುತ್ತಿತ್ತು. ಕೆಂಪುಸೇನೆ ಸೇರಲು ಹಳ್ಳಿಹಳ್ಳಿಯಿಂದಲೂ ಜನರು ತಾವಾಗಿಯೇ ಮುಂದಾಗುತ್ತಿದ್ದರು. ಕೊಮಿಂಟಾಂಗ್ ಸೈನಿಕರು ಅನುವು ದೊರೆತಾಗಲೆಲ್ಲ ಹಳ್ಳಿಗಳನ್ನು ಲೂಟಿಮಾಡಿ ಆ ಲೂಟಿಯನ್ನು ಭೋಗಕ್ಕೆ, ತಮ್ಮ ಸ್ವಾರ್ಥಕ್ಕೆ ಉಪಯೋಗಿಸಿಕೊಳ್ಳುತ್ತಿದ್ದರು. ಇದರಿಂದ ಜನಗಳಿಗೆ ಕೊಮಿಂಟಾಂಗಿನ ಸೈನ್ಯಗಳನ್ನು ಕಂಡರೆ ದ್ವೇಷ. ಕೆಂಪುಸೇನೆ ಜನಗಳಿಂದಲೇ ಹುಟ್ಟಿ ಬೆಳೆದ, ಜನಗಳ ನಡುವೆ ನೀರಿನಲ್ಲಿನ ಮೀನುಗಳಂತೆ ಕೂಡಿ ಹೋಗಿತ್ತು. ಜನರ ವಿಶ್ವಾಸ ಮತ್ತು ಸಹಕಾರ ಅದರ ಶಕ್ತಿಯ ಅಸ್ತಿವಾರ. ಕೆಂಪುಸೇನೆಗಳಿಗೆ ಕೊಮಿಂಟಾಂಗ್ ಸೈನ್ಯಗಳ ಸುಳಿವು ತಿಳಿಯುವಂತೆ ಬೇಹುಗಾರರ ಕೆಲಸವನ್ನು ಹಳ್ಳಿಯ ಹುಡುಗರು ತಾವಾಗಿಯೇ ಮಾಡುತ್ತಿದ್ದರು.

ಕೊಮಿಂಟಾಂಗ್ ಸೈನ್ಯಗಳಿಗೆ ಆಹಾರವೇ ಸಿಗದಂತೆ ಮಾಡುತ್ತಿದ್ದರು. ರಾತ್ರಿ ರಾತ್ರಿ ಕೊಮಿಂಟಾಂಗ್ ಸೈನ್ಯಗಳ ಮೇಲೆ ಬಿದ್ದು ನಷ್ಟ, ಉಂಟುಮಾಡು ತ್ತಿದ್ದರು. ಅದೇ ಕೊಮಿಂಟಾಂಗ್ ಸೈನಿಕರು ಜನವಿರೋಧ ಕಟ್ಟಿಕೊಂಡಿದ್ದು ದರಿಂದ ಅವರಿಗೆ ಕೆಂಪುಸೇನೆಗಳ ವಿರುದ್ಧ ನಿಲ್ಲುವುದು ಅಸಾಧ್ಯವಾಯಿತು.

ಕೆಂಪುಸೈನ್ಯಗಳಿಗೆ ನಾಯಕನಾಗಿದ್ದ ಚುಟೇ ಅಸಮಾನ ಬುದ್ಧಿಶಾಲಿ. ಪ್ರಚಂಡ ಪ್ರತಿಭಾವಂತ. ಅವನೂ ಜರ್ಮನಿಯಲ್ಲಿ ಶಿಕ್ಷಣ ಪಡೆದಿದ್ದವನು. ಇದೂ ಅಲ್ಲದೆ ಆತನಿಗೆ ಯುದ್ಧಗಳ ಅನುಭವವಿತ್ತು. ಕೆಂಪುಸೇನೆ ಕೊಮಿಂ ಟಾಂಗ್ ಸೈನಿಕರು ನಿರೀಕ್ಷಿಸಿದಷ್ಟು ಬುದ್ಧಿಹೀನವಾಗಿರಲಿಲ್ಲ. ಇದರ ಯುದ್ಧ ರೀತಿ, ಧಾಳಿಯ ವಿಧಾನಗಳೂ ಕೊಮಿಂಟಾಂಗ್ ಸೈನಿಕರಿಗೆ ಹೊಸದು. ಚುಟೇಯ ಕಿರುಕುಳ ಯುದ್ಧ ಕೊಮಿಂಟಾಂಗ್ ಸೇನೆಗಳಿಗೆ ಅನಿರೀಕ್ಷಿತ ಆಘಾತ. ಕೊಮಿಂಟಾಂಗ್ ನಾಯಕರು ಮಾತ್ರ ಕಮ್ಯುನಿಸ್ಟರನ್ನು ಇತರ ರಂತೆಯೇ ಸುಲಭವಾಗಿ ಅಡಗಿಸಿಬಿಡಬಹುದು ಎಂಬ ಅಹಂಭಾವದಿಂದಿದ್ದರು. ೧೯೩೦ನೆಯ ಅಕ್ಟೋಬರಿನ ನಂತರ ಚಿಯಾಂಗ್ ಕಮ್ಯುನಿಸ್ಟರನ್ನು ನಿರ್ನಾಮ ಗೊಳಿಸುವ ಮೊದಲನೆಯ ಧಾಳಿಗೆ ಸಿದ್ಧನಾದನು.

೧೯೨೭ ರಲ್ಲಿ ಕಮ್ಯುನಿಸ್ಟ್ ಮತ್ತು ಕೊಮಿಂಟಾಂಗ್ ಪಕ್ಷಗಳು ಭಿನ್ನ ವಾಗಿ ಒಂದು ಕ್ರಾಂತಿಯ ಪ್ರಗತಿಯ ಹಾದಿಯನ್ನೂ, ಮತ್ತೊಂದು ಪ್ರತಿ ಕ್ರಾಂತಿಯ, ವಿಗತಿಯ ಹಾದಿಯನ್ನೂ ಹಿಡಿದ ಮೇಲೆ ೧೯೩೦ ರ ವರೆಗೂ ಮೊದಲ ಘಟ್ಟವೆಂದು ಗಣಿಸಬಹುದು. ಈ ಕಾಲಾವಧಿಯಲ್ಲಿ ಕಮ್ಯುನಿಸ್ಟ್ ಪಾರ್ಟಿಯು ಎಲ್ಲೆಲ್ಲಿಯೂ ಕೆಂಪುಸೇನೆಗಳನ್ನೂ ಸೋವಿಯಟ್‌ಗಳನ್ನೂ ಸ್ಥಾಪಿಸಿ ಬಲಿಷ್ಠವಾಯಿತು. ೧೯೩೦ ರ ವೇಳೆಗಾಗಲೇ ೧೦ ಪ್ರಾಂತ್ಯಗಳಲ್ಲಿ ಸೋವಿಯಟ್‌ಗಳು ಸ್ಥಾಪಿತವಾಗಿದ್ದುವು. ಲೀಗ್ ಆಫ್ ನೇಷನ್ಸ್ ದೂರ ಪ್ರಾಚ್ಯದ ಸ್ಥಿತಿಗತಿಗಳನ್ನು ತಿಳಿಯಲು ಕಳುಹಿಸಿದ ನಿಯೋಗದವರ ಲೆಕ್ಕದಂತೆ ಈ ಹೊತ್ತಿಗೆ ಚೀನದ ೧/೪ ಭಾಗ ಸೋವಿಯಟ್‌ಗಳಾಗಿದ್ದಿತು. ಅದೂ ಅಲ್ಲದೆ ನಾನ್‌ಕಿಂಗ್ ಸರ್ಕಾರಕ್ಕಿಂತಲೂ ಸೋವಿಯಟ್ ಸರ್ಕಾರಗಳು ರಾಜ್ಯಾಡಳಿತವನ್ನು ಹೆಚ್ಚು ವ್ಯವಸ್ಥೆಯಿಂದ ಸಾಗಿಸಿಕೊಂಡಿದ್ದವೆಂದೂ ತಿಳಿ ಯುತ್ತದೆ. ಈ ಕಮ್ಯುನಿಸ್ಟರ ಬೆಳವಣಿಗೆಯನ್ನು ಅಂತರ್ಯುದ್ಧದ ಮೊದಲ ಘಟ್ಟ ಎನ್ನಬಹುದು. ಅಂತರ್ಯುದ್ಧದ ಕಾಲ ಎರಡನೆಯ ಘಟ್ಟ.

೧೯೩೪ ರಲ್ಲಿಯೇ ಚೀನೀ ಕಮ್ಯೂನಿಸ್ಟರು ಉತ್ತರಕ್ಕೆ ತಮ್ಮ ಅಪೋಘ ಮತ್ತು ಕಠಿನವಾದ "ಮಹಾಯಾತ್ರೆ" [Long March] ಯನ್ನು ಪ್ರಾರಂಭಿಸಿದುದು. ಹೀಗೆ ಉತ್ತರಕ್ಕೆ ಬಂದು ಅಲ್ಲಿ ತಮ್ಮದೇ ಸರ್ಕಾರ ಸ್ಥಾಪಿಸಿದ ಕಾಲ ಮೂರನೆಯ ಘಟ್ಟ.

## ಅಳಿವು—ಉಳಿವು

ಚಿಯಾಂಗನು ೧೯೩೦ ನೆಯ ಡಿಸೆಂಬರಿನಲ್ಲಿ ವಿಶೇಷ ಸಿದ್ಧತೆಗಳನ್ನು ಮಾಡಿಕೊಂಡು ಕಮ್ಯೂನಿಸ್ಟರ ಮೇಲೆ ಮೊದಲನೆಯ ಧಾಳಿಯನ್ನಾರಂಭಿಸಿದ. ಕೆಂಪುಸೇನೆಯ ಬೇಹುಗಾರರು ಸುಸಂಘಟಿತರಾಗಿದ್ದುದರಿಂದ ಕೊಮಿಂಟಾಂಗ್ ಸೈನ್ಯಗಳ ನೆಲೆ ಈ ಸೇನೆಗೆ ತಿಳಿದಿರುತ್ತಿತ್ತು. ಆದರೆ ಇದರ ನೆಲೆ ಮಾತ್ರ ಕೊಮಿಂಟಾಂಗ್ ಸೈನ್ಯಕ್ಕೆ ತಿಳಿದಿರುತ್ತಿರಲಿಲ್ಲ. ಅಲ್ಲದೆ ನ್ಯಾನ್‌ಕಿಂಗ್ ಸರಕಾರದ ಮುಂದಬುದ್ಧಿಯ ಫಲವಾಗಿ ಪತ್ರಿಕೆಗಳೆಲ್ಲವೂ ಸರ್ಕಾರದ ಸೈನ್ಯಗಳ ಶಿಬಿರದ ನೆಲೆಯನ್ನು ಪ್ರಕಟಿಸುತ್ತಿದ್ದುವು. ಇದೂ ಕೆಂಪುಸೇನೆಗೆ ಸಹಕಾರವಾಗಿತ್ತು.

ಕೆಂಪುಸೇನೆಯು ಕೊಮಿಂಟಾಂಗ್ ಸೈನ್ಯವನ್ನು ಎದುರಿಸಲು ಉಪಯೋಗಿಸಿದ ವಿಧಾನ—ಕಿರುಕುಳ ಯುದ್ಧ ರೀತಿ. ಅವು ಹಳ್ಳಿಗಳಿಗೆ ಬರುವಂತೆ ಮಾಡಿ ಅಲ್ಲಿ ಇದ್ದಕ್ಕಿದ್ದಂತೆಯೇ ಎದುರಿಸಿ ಮತ್ತೆ ಬೇರೆ ಕಡೆ ಸಾಗುವುದು ಈ ತಂತ್ರ. ಈ ರೀತಿಯಲ್ಲಿ ಕೊಮಿಂಟಾಂಗ್ ಸೈನ್ಯವನ್ನು ಸೋವಿಯಟ್ ಪ್ರದೇಶದ ಒಳಭಾಗದಲ್ಲಿ ಸೆಳೆದುಕೊಂಡುಬಿಟ್ಟರು. ಕೆಂಪುಸೈನ್ಯಗಳೆಲ್ಲ ಏಕೀಕೃತವಾಗಿ ಒಂದೇ ಬಾರಿ ಇವುಗಳ ಮೇಲೆ ಬಿದ್ದವು. ಇವುಗಳ ಎರಡು ಸೈನ್ಯ ದಳಗಳಲ್ಲೊಂದನ್ನು—ಸುಮಾರು ೧೦,೦೦೦ ಸೈನಿಕರನ್ನು ೫೦,೦೦೦ ಮಂದಿ ಕೆಂಪುಸೈನಿಕರು ಸೆರೆಹಿಡಿದರು. ಸೇನೆಯ ನಾಯಕ ಚಾಂಗ್ ಹೂ ಚಾಂಗ್ ಆ ಯುದ್ಧದಲ್ಲಿ ಸತ್ತನು. ಕೊಮಿಂಟಾಂಗ್ ಸೈನ್ಯಗಳ ಮತ್ತೊಂದು ದಳದ ಸೇನಾನಿ ಟಾಂಗ್ ಟಾಯಾನ್‌ನಿಗೆ ಚಾಂಗನ ಸೈನ್ಯದ ಗತಿಯೇ ತಿಳಿಯದೆ ಗಾಬರಿಯಿಂದ ಹಿಮ್ಮೆಟ್ಟಲು ಯತ್ನಿಸುತ್ತಿರುವಾಗ ಹಿಂದಿನಿಂದ ಕೆಂಪುಸೈನ್ಯಗಳು ಮುತ್ತಿಗೆ ಹಾಕಿದುವು. ಟಾಂಗನ ಸೈನ್ಯ ನಾಮಾವಶೇಷವಾಯಿತು. ಕೆಂಪುಸೇನೆಗೆ ೪೦೦೦ ಬಂದೂಕುಗಳು ದೊರೆ

ತುವು. ಈ ವಿಜಯಗಳಿಂದ ಗಾಬರಿಗೊಂಡು ಅಳಿದು ಉಳಿದ ಸೈನ್ಯವೂ ಚದುರಿತು. ಅಂತೂ ಈ ಮೊದಲ ಧಾಳಿ ಕಮ್ಯೂನಿಸ್ಟರ ವಿಜಯದಲ್ಲಿ ಕೊನೆಗೊಂಡಿತು.

ಸೋಲಿನಿಂದ ಗಾಬರಿಗೊಂಡ ಚಿಯಾಂಗ್ ಬೇರೊಂದು ವಿಧಾನವನ್ನು ಅನುಸರಿಸಿ ಹೋ-ಯಿಂಗ್-ಚಿಂಗನ ನಾಯಕತ್ವದಲ್ಲಿ ಎರಡನೆಯ ಧಾಳಿಗೆ ಸಿದ್ಧಗೊಳಿಸಿದನು. ಈ ಧಾಳಿ ನಡೆಸಲು ೧೯೩೧ರ ಜನವರಿಯಿಂದ ಮೇ ವರೆಗೂ ಸಿದ್ಧತೆ ನಡೆಯಿತು. ಅತ್ತ ಕಮ್ಯೂನಿಸ್ಟರೂ ಅದನ್ನು ಎದುರಿಸಲು ಸಾಕಷ್ಟು ಸಿದ್ಧರಾಗಿದ್ದರು. ಮೇ ೧೯ ರಂದು ಈ ಎರಡನೆಯ ಧಾಳಿ ಆರಂಭವಾಯಿತು. ಇದರಲ್ಲಿ ಕೊಮಿಂಟಾಂಗಿನ ಸೈನ್ಯದ ೨ ಲಕ್ಷ ಸೈನಿಕರು ಭಾಗ ವಹಿಸಿದ್ದರು. ಈ ಬಾರಿಯ ರಣರಂಗ—ಚಿಯಾನ್, ಕಿಯಾಂಗ್ಸಿ, ಕ್ವಾಂಚಾಂಗಿನಿಂದ ಫೂಕ್ಯೆನ್ ಪ್ರಾಂತ್ಯದ ಚಿಯೆನ್ನಿಂಗ್ ನಗರದ ವರೆಗೂ ಹಬ್ಬಿತ್ತು. ಹಿಂದಿನ ಅನುಭವದಿಂದ ಕೆಂಪುಸೇನೆಯು ೧೫ ದಿನಗಳಲ್ಲಿಯೇ ವೈರಿಯ ಸೈನ್ಯವನ್ನು ಭೇದಿಸಿ ಕಿರುಕುಳ ಕೊಡಲಾರಂಭಿಸಿತು. ಇದರಿಂದ ನಾಯಕ ಚುಟೇಗೆ ಜಯದ ಜತೆಗೆ ಮುಖ್ಯವಾಗಿ ೩೦,೦೦೦ ಬಂದೂಕುಗಳು ದೊರೆತುವು. ಚಿಯಾಂಗನಿಗೆ ಇನ್ನೊಂದು ಸೋಲು ಬಂತು! ತುಂಬ ಬೇಸರವಾಯಿತು.

ಈ ಬಾರಿ ತಾನೇ ದಂಡಯಾತ್ರೆಯ ನಾಯಕನಾಗಿ ಸಿದ್ಧತೆಗಳನ್ನು ನಡೆಸಿದ. ಮೂರನೆಯ ಧಾಳಿ ಜುಲೈ ತಿಂಗಳಿನಲ್ಲಿಯೇ ಆರಂಭವಾಯಿತು. ನ್ಯಾನ್‌ಚಾಂಗಿನಿಂದ ಚಿಯಾಂಗನೇ ಸೈನ್ಯ ನಡೆಸಿಕೊಂಡು ಧಾಳಿಯಾರಂಭಿಸಿದನು. ಮುಂದಿನ ದಂಡಯಾತ್ರೆ ಇನ್ನೂ ತಡವಾಗಬಹುದೆಂದುಕೊಂಡಿದ್ದ ಕೆಂಪುಸೇನೆಯ ನಿರೀಕ್ಷೆಗೆ ವಿರುದ್ಧವಾಗಿ ಜುಲೈನಲ್ಲಿಯೇ ಧಾಳಿಯಾರಂಭವಾಯಿತು. ಚಿಯಾಂಗನೂ ಕೂಡ ತನ್ನ ಅವಸರದ ಅವಾಂತರದಲ್ಲಿ ಕೆಲವು ವಿಷಯಗಳನ್ನು ಗಮನಿಸಲೇ ಇಲ್ಲ. ಧಾಳಿಯ ಸೈನ್ಯಗಳನ್ನು ನಾಲ್ಕು ಭಾಗಗಳನ್ನಾಗಿ ವಿಭಾಗಿಸಿ ಒಂದೊಂದೂ ಸಮಾನಾಂತರವಾಗಿ ಮುನ್ನಡೆಯುವಂತೆ ಚಿಯಾಂಗನ ಆಜ್ಞೆಯಾಗಿತ್ತು. ಕೆಂಪುಸೈನ್ಯಗಳು ಈ ನಾಲ್ಕು ಸೇನೆಗಳ ನಡುನಡುವೆ ಬಿಟ್ಟ ಪ್ರದೇಶಗಳಲ್ಲಿ ಸೇರಿಕೊಂಡು ಕಿರುಕುಳ ಯುದ್ಧ ಹೂಡಿದರು. ಕೊಮಿಂಟಾಂಗ್ ಸೈನ್ಯದ ಬಲಹೀನವಾದ ಎರಡನೆಯ ವಿಭಾಗ

ವನ್ನು ಮೊದಲು ಸೋಲಿಸಿ, ಅನೇಕ ಬಂದೂಕುಗಳನ್ನೂ ಸಾಮಗ್ರಿಗಳನ್ನೂ ಕೆಂಪುಸೇನೆಯು ವಶಪಡಿಸಿಕೊಂಡು ಆ ಮೇಲೆ ಉಳಿದೆರಡು ಸೈನ್ಯಗಳನ್ನೂ ಸೋಲಿಸಿತು. ಇದರಿಂದ ಮತ್ತೂ ಕೋಪಗೊಂಡ ಚಿಯಾಂಗನು ತನ್ನೆಲ್ಲ ಸೈನ್ಯಗಳನ್ನೂ ಒಂದುಗೂಡಿಸಿ ಧಾಳಿ ನಡೆಸಿದನು. ಕೆಂಪುಸೈನ್ಯಗಳು ಹಳ್ಳಿಗಳಲ್ಲಿನ ಸಾಮಗ್ರಿಯನ್ನೂ ರೈತರನ್ನೂ ತಮ್ಮೊಂದಿಗೇ ಸಾಗಿಸಿಕೊಂಡು, ಅವನ್ನು ನಿರ್ಜನವನ್ನಾಗಿಸಿ ಸಾಗುತ್ತಿದ್ದರು. ಇದರಿಂದ ಚಿಯಾಂಗನ ಅಗಾಧ ಸೈನ್ಯಕ್ಕೆ ಆಹಾರ ಸಾಮಗ್ರಿಯೇ ದೊರಕದಂತಾಯಿತು. ಕೆಂಪುಸೇನೆಗಳೆಲ್ಲ 'ಟುಂಗ್ ಕು' ನಗರದಲ್ಲಿ ಬಲವಾದ ನೆಲೆಯನ್ನು ಮಾಡಿಕೊಂಡರು. ಎಲ್ಲ ಕಡೆಗಳಲ್ಲಿಯೂ ರೈತರೇ ಗೆರಿಲ್ಲಗಳಾಗಿ ಕೊಮಿಂಟಾಂಗ್ ಸೈನ್ಯಗಳ ಮೇಲೆ ಅನಿರೀಕ್ಷಿತ ಧಾಳಿಗಳನ್ನು ನಡೆಸುತ್ತಿದ್ದರು. ಇದರಿಂದ ಕೊಮಿಂಟಾಂಗ್ ಸೈನ್ಯಗಳಿಗೆ ದಿಕ್ಕು ತೋರದಂತಾಗುತ್ತಿತ್ತು.

ಚಿಯಾಂಗನ ೧೯ ನೆಯ ಸೈನ್ಯವನ್ನು ಕೆಂಪುಸೇನೆ ಮುತ್ತಿದುದು ಬಹಳ ತಪ್ಪಾಯಿತು. ಇದರಲ್ಲಿನ ಸೈನಿಕರೆಲ್ಲರೂ ಹೊಸಬರು. ಕೆಂಪುಸೇನೆಯ ಮೇಲೆ ಕೈ ಮಾಡಲು ಅವರಿಗೆ ಸ್ವಲ್ಪವೂ ಇಷ್ಟವಿರಲಿಲ್ಲ. ಆದರೆ ಕೆಂಪುಸೇನೆ ತಾನಾಗಿಯೇ ಮೇಲೆ ಬಿದ್ದುದರಿಂದ ಅವರೂ ಹೋರಾಡಬೇಕಾಯಿತು. ಯಾರಿಗೂ ಸೋಲಾಗಲೀ ಜಯವಾಗಲಿ ಒದಗದೆ ಎರಡು ಸೈನ್ಯಗಳೂ ತಮ್ಮ ತಮ್ಮ ನೆಲೆಗಳಿಗೆ ಹಿಂತಿರುಗಿದವು. ಚಿಯಾಂಗನು ಈ ಬಾರಿಯೂ ತನ್ನ ಪ್ರಯತ್ನದಲ್ಲಿ ವಿಫಲನಾಗಿ ಹಿಂದಿರುಗಬೇಕಾಯಿತು. ಕೆಂಪುಸೇನೆಗಳಿಗೂ ಕೊಂಚ ವಿಶ್ರಾಂತಿ ದೊರೆತಂತಾಯಿತು.

ಈ ಕಾಲದಲ್ಲಿಯೇ (ಡಿಸೆಂಬರ್ ೧೪ರಂದು) "ನಿಂಗ್ಟು ದಂಗೆ" ಯಾದುದು. ನಿಂಗ್ಟುವಿನಲ್ಲಿ ಸುಮಾರು ೧೦,೦೦೦ ಬಲದ ಕೊಮಿಂಟಾಂಗಿನ ಸೇನೆಯೊಂದಿತ್ತು. ಹಿಂದೆ ಫೆಂಗ್-ಯು-ಸಿಯಾಂಗನ ನಾಯಕತ್ವದಲ್ಲಿದ್ದು ಈಗ ಸೂನ್-ಲಿಯೆನ್-ಚಾಂಗನ ಕೈಕೆಳಗಿದ್ದ ಸೈನ್ಯ ತುಂಗ್ ತ್ಸೆಂಗ್ ತಾಂಗೆ ಮತ್ತು ತ್ಸಾಓ-ಪಾಓಸುನ್ ಎಂಬುವರ ನಾಯಕತ್ವದಲ್ಲಿ ಚಿಯಾಂಗನ ವಿರುದ್ಧ ದಂಗೆಯೆದ್ದು ಕಮ್ಯುನಿಸ್ಟರ ಪಕ್ಷ ಸೇರಿಕೊಂಡಿತು. ಇದೇ ಕೆಂಪುಸೇನೆಯ ೫ನೆಯ ದಳ.

ಡಿಸೆಂಬರ್ ೧೧ ರಂದು ಚೀನದ ಮೊದಲನೆಯ ಸೋವಿಯಟ್ ಸಮ್ಮೇ

ಲನೆ ಕೂಡಿತು. ಕೇಂದ್ರ ಸೋವಿಯಟ್ ಸರ್ಕಾರದ ಸ್ಥಾಪನೆಯೂ ಆಯಿತು. ಕೆಂಪುಸೇನೆಯೂ ಕೇಂದ್ರೀಕೃತವಾಗಿ ಜನರಲ್ ಚುಟೀಯ ನಾಯಕತ್ವದಲ್ಲಿ ವ್ಯವಸ್ಥಿತವಾಯಿತು. ಆ ವೇಳೆಗೆ ಕಿಯಾಂಗ್ಸಿ, ಫ್ಯೂಕ್ಯೆನ್, ಹುನಾನ್-ಕಿಯಾಂಗ್ಸಿ, ಹುನಾನ್-ಹೂಪೆ-ಕಿಯಾಂಗ್ಸಿ ಮತ್ತು ಫ್ಯೂಕ್ಯೆನ್-ಚೆಕಿಯಾಂಗ್-ಕಿಯಾಂಗ್ಸಿ ಗಡಿಪ್ರದೇಶಗಳಲ್ಲಿ ಸೋವಿಯಟ್‌ಗಳು ಸ್ಥಾಪಿಸಲ್ಪಟ್ಟಿದ್ದುವು. ಕಾನ್ಸು, ಷೆನ್ಸಿ ಮತ್ತು ಜೆಕ್ವಾನ್ ಪ್ರಾಂತ್ಯಗಳಲ್ಲಿಯೂ ಸೋವಿಯಟ್‌ಗಳು ಬೆಳೆದಿದ್ದುವು. ೧೯೩೧ರಲ್ಲಿ ಈ ವಿವಿಧ ಸೋವಿಯಟ್‌ಗಳಿಗೆ ಸಮಾಚಾರ ಸಂಬಂಧ, ಸಂಪರ್ಕ ಮತ್ತು ವಾರ್ತಾ ಸೌಕರ್ಯಗಳ ವ್ಯವಸ್ಥೆಯಾಗಿತ್ತು. ಕಮ್ಯುನಿಸ್ಟರು ವೈರ್‌ಲೆಸ್ ವಾರ್ತಾವಾಹಿನಿಯನ್ನು ಉಪಯೋಗಿಸಿಕೊಂಡಿದ್ದರು; ಅದಕ್ಕೆ ಬೇಕಾದ ಸೌಕರ್ಯವೂ ಇತ್ತು.

ಭಿನ್ನ ಸೋವಿಯಟ್ ಪ್ರದೇಶಗಳಲ್ಲಿನ ಸ್ಥಿತಿಗಳು ಬೇರೆ ಬೇರೆಯಾಗಿದ್ದುವು. ಕೇಂದ್ರ ಸೋವಿಯಟ್ ಸರ್ಕಾರದೊಂದಿಗೆ ಹೋ ಲುಂಗನ ಸೈನ್ಯಗಳಿಗೆ ಸಂಪರ್ಕವಿರಲಿಲ್ಲ. ಆದರೆ ಉಳಿದೆಲ್ಲದಕ್ಕೂ ಸಂಬಂಧ ಕಲ್ಪಿಸಿಕೊಳ್ಳಲಾಗಿತ್ತು. ಪ್ರತಿಯೊಂದು ಸೋವಿಯಟ್ ಜಿಲ್ಲೆಯಲ್ಲೂ ಅಲ್ಲಿನ ವಿಶೇಷ ಪರಿಸ್ಥಿತಿಗನುಗುಣವಾಗಿ ಕಾರ್ಯಕ್ರಮ ಕೈಗೊಳ್ಳಬೇಕಾಗುತ್ತಿದ್ದಿತು. ಹುನಾನ್-ಹೂಪೆ ಮತ್ತು ಹೂಪೆ-ಹೊನಾನ್-ಅನ್ಹುಯೆ ಸೋವಿಯಟ್‌ಗಳಲ್ಲಿ ಸೋವಿಯಟ್ ತತ್ವ ಜನಗಳಲ್ಲಿ ಬೇರೂರಿತ್ತು. ೧೯೨೫-೨೭ರ ಕ್ರಾಂತಿಯಿಂದ ಎಚ್ಚರಗೊಂಡಿದ್ದ ಅಲ್ಲಿಯ ಕ್ರಾಂತಿಕಾರೀ ಜನತೆ ತಮ್ಮದೇ ಆದ ಕೆಂಪುಸೇನೆಗಳನ್ನು ನಿರ್ಮಿಸಿಕೊಂಡಿದ್ದರು. ಆದರೆ ಕಿಯಾಂಗ್ಸಿ ಪ್ರಾಂತ್ಯದ ಜನರಿಗೆ ಸೋವಿಯಟ್ ಯೋಜನೆಯನ್ನು ವಿವರಿಸಿ, ಸೋವಿಯಟ್‌ಗಳನ್ನು ಸ್ಥಾಪಿಸಿ ಜನತಾ ಚಳುವಳಿಗಳನ್ನು ಸಾಧಿಸುವ ದಾರಿ ಇನ್ನೂ ತೋರಿಸಲ್ಪಟ್ಟಿರಲಿಲ್ಲ.

ಡಿಸೆಂಬರಿನಿಂದ ೧೯೩೨ನೆಯ ಏಪ್ರಿಲ್ ವರೆಗಿನ ಕಾಲವನ್ನು ಕಮ್ಯುನಿಸ್ಟರು ತಮ್ಮ ಸ್ಥಾನಗಳನ್ನು, ನೆಲೆಗಳನ್ನು ಭದ್ರಪಡಿಸಿಕೊಂಡು ಕೇಂದ್ರೀಕೃತ ಸರ್ಕಾರವನ್ನು ಸ್ಥಾಪಿಸಿದರು. ಸೋವಿಯಟ್‌ಗಳ ಸ್ಥಾಪನೆಯು ನಿರಂತರವಾಗಿ ನಡೆದಂತೆ ಅಲ್ಲೆಲ್ಲಾ ಶಾಲೆಗಳೂ ತೆರೆಯಲ್ಪಟ್ಟು, ಜನತೆಗೆ ವಿದ್ಯಾಭ್ಯಾಸ ಕೂಡ ಆರಂಭವಾಗಿತ್ತು.

೧೯೩೩ ನೆಯ ಏಪ್ರಿಲ್‌ನಲ್ಲಿ ಕಮ್ಯೂನಿಸ್ಟರ ಮೇಲೆ ನಾಲ್ಕನೆಯ ಧಾಳಿ ಆರಂಭವಾಯಿತು. ಕಿಯಾಂಗ್ಸಿ ಸೋವಿಯಟ್‌ನಲ್ಲಿನ ಆರ್ಥಿಕ ಪರಿಸ್ಥಿತಿ ವಿಷಮವಾಗಿತ್ತು. ಅಲ್ಲದೆ ಕೆಂಪುಸೇನೆಯು ಅನುಸರಿಸಿದ ನೀತಿ ಯೋಗ್ಯ ವಾಗಿರಲಿಲ್ಲ. ಮೊದಲು ಚಿಯಾಂಗನ ಸೈನ್ಯಗಳನ್ನು ಎದುರಿಸುವುದರ ಬದಲು ಕೆಂಪುಸೇನೆ ಕ್ವಾಟುಂಗಿನಲ್ಲಿ ನ್ಯಾನ್ಶಿಯಾಂಗನ್ನು ಮುತ್ತಿ ಮುಂದೆ ಕಿಯಾಂಗ್ಸಿ ಸೋವಿಯಟ್ ಪ್ರಾಂತ್ಯಕ್ಕೆ ಹೋಗಿ ಸೇರಿಕೊಂಡಿತು. ಚಿಯಾಂಗನು ಆಗ ಜಪಾನೀ ಪರನಾಗಿದ್ದನು. ಸಾಧ್ಯವಾದಷ್ಟು ಬೇಗ ಕಮ್ಯೂನಿಸ್ಟರನ್ನು ನಿರ್ನಾಮಗೊಳಿಸುವ ಆತುರದಲ್ಲಿ ತನ್ನ ಮೂರು ದೊಡ್ಡ ಸೈನ್ಯಗಳಾದ ೧೧ನೆ, ೫೨ನೆ ಮತ್ತು ೫೯ ನೆಯ ದಳಗಳನ್ನು ಛೇನ್-ಛೆಂಗನ ನಾಯಕತ್ವದಲ್ಲಿ ಕಳು ಹಿಸಿದನು. ಕಠಿಣವಾದ ಈ ಯುದ್ಧದಲ್ಲಿ ಕೆಂಪುಸೇನೆಯು ಪ್ರಬಲವಾಗಿ ಹೋರಾಡಿ ೫೨ ನೆಯ ಮತ್ತು ೫೯ ನೆಯ ದಳಗಳನ್ನು ನಿರ್ನಾಮಗೊಳಿಸಿತು. ೧೨ ಸೈನ್ಯದ ತುಣುಕುಗಳ ಬಂದೂಕುಗಳೂ, ಹಲವು ಮಿಷನ್‌ಗನ್‌ಗಳೂ, ಮೂವತ್ತು ಲಕ್ಷ ರೌಂಡುಗಳಷ್ಟು ಮದ್ದು ಗುಂಡು ಕೆಂಪುಸೇನೆಯ ವಶ ವಾಯಿತು. ೧೧ ನೆಯ ದಳದ ಎಲ್ಲಾ ಯುದ್ಧ ಸಾಮುಗ್ರಿಗಳೂ ವಶವಾದುವು. ಸೆರೆ ಸಿಕ್ಕಿದ ೧೩,೦೦೦ ಕೊಮಿಂಟಾಂಗ್ ಸೈನಿಕರೂ ಕೆಂಪುಸೇನೆಯನ್ನು ಸೇರಿಕೊಂಡರು.

ಈ ನಾಲ್ಕು ದಂಡಯಾತ್ರೆಗಳಲ್ಲಿಯೂ ಕಮ್ಯೂನಿಸ್ಟರಿಗೇ ವಿಜಯವಾದು ದರಿಂದ ಚಿಯಾಂಗನಿಗೆ ಗಾಬರಿಯಾಯಿತು. ಕೆಂಪುಸೇನೆಯು ಅಳಿಸಿ ಹೋಗುವ ಬದಲು ಎಲ್ಲ ಕಡೆಗೂ ಹರಡುತ್ತಿತ್ತು. ಧಾಳಿಗಳ ಫಲವಾಗಿ ಪ್ರಬಲವಾದುದೂ ಅಲ್ಲದೆ, ನ್ಯಾನ್‌ಕಿಂಗ್ ಸರ್ಕಾರದ ಅಧಿಕಾರವನ್ನೇ ಪ್ರಶ್ನಿಸುವಂತೆ ಪ್ರಬಲ ಸೋವಿಯಟ್ ಸರ್ಕಾರವೂ ಸ್ಥಾಪಿತವಾಯಿತು. ಪ್ರತಿ ಬಾರಿಯ ದಂಡಯಾತ್ರೆಯಲ್ಲಿಯೂ ಕೊಮಿಂಟಾಂಗ್ ಸೈನ್ಯದಿಂದ ಬಹು ಮಂದಿ ಕೆಂಪುಸೇನೆಗೆ ಹೋಗಿ ಸೇರುತ್ತಿದ್ದರು. ಇದರಿಂದ ಚಿಯಾಂಗ್ ಜಪಾನೀಯರೊಂದಿಗೆ ಮೋ-ಉಮೆಟ್ಸು ಕರಾರು ಮಾಡಿಕೊಂಡು ನ್ಯಾನ್ ಚಾಂಗಿಗೆ ತಾನೇ ಬಂದು ೫ ನೆಯ ದಂಡಯಾತ್ರೆಗೆ ಸಿದ್ಧಗೊಳಿಸಿದನು. ಛೇನ್-ಛೆಂಗನ ಸೋಲನ್ನು ಕಂಡು ಯುದ್ಧ ವಿಧಾನ ಬದಲಿಸಬೇಕೆಂಬುದು ಅವನಿಗೆ ಮನದಟ್ಟಾಯಿತು. ವಿದೇಶೀಯರ ಸಹಾಯ, ಸಹಕಾರ ಮತ್ತು

ಸಲಹೆಯಂತೆ ೫ನೆಯ ಧಾಳಿಯನ್ನು ೧೯೩೩ನೆಯ ಅಕ್ಟೋಬರಿನಲ್ಲಿ ಪ್ರಾರಂಭಿಸಿದ. ಈ ಬಾರಿ ಆರ್ಥಿಕವಾಗಿ ಕೆಂಪುಸೇನೆಗಳನ್ನು ಮೂಲೆಗುಂಪಾಗಿಸುವ ಚಾತುರ್ಯವೇ ಅವನ ಮುಖ್ಯ ಅಸ್ತ್ರ. ಕಮ್ಯುನಿಸ್ಟರು ಆರ್ಥಿಕವಾಗಿಯೂ ಸಾಮಗ್ರಿಗಳ ವಿಚಾರವಾಗಿಯೂ ಬಲಹೀನರಾಗುವಂತೆ ತಡೆಕಟ್ಟುವ "ಅಡ್ಡಗಟ್ಟಿನ" [Blockade] ನೀತಿಯನ್ನೂ ಇದೇ ಬಾರಿ ಅನುಸರಿಸಿದುದು. ಮೊದಲಿನಂತೆ ಕೇಂದ್ರ ಸೇನೆಯನ್ನೇ ಮುತ್ತಿ ಧಾಳಿ ನಡೆಸುವ ಬದಲು, ಹೊನಾನ್, ಹೂಪೆ, ಅನ್‌ಹುಯಿ ಸೇನೆಗಳ ಮೇಲೆ ಧಾಳಿ ನಡೆಸಿದ. ಕೆಂಪುಸೇನೆ ಅನಿವಾರ್ಯವಾಗಿ ಹಿಮ್ಮೆಟ್ಟಬೇಕಾಯಿತು. ಎಲ್ಲೆಲ್ಲಿಯೂ ಆರ್ಥಿಕ ತಡೆಗೆ ಸಿಕ್ಕಿ, ಸೋವಿಯಟ್‌ಗಳ ಆರ್ಥಿಕ ಸ್ಥಿತಿ ವಿಷಮಗೊಂಡಿದ್ದಾಗ ಚಿಯಾಂಗನು ಪ್ರಬಲವಾಗಿ ಧಾಳಿ ನಡೆಸಲಾರಂಭಿಸಿದನು.

ನವಂಬರ್‌ನಲ್ಲಿ ಚಿಯಾಂಗನ ವಿರುದ್ಧ ಅವನ ೧೯ನೆಯ ಸೈನ್ಯ ಫೂಕ್ಯೆನ್ ಪ್ರಾಂತ್ಯದಲ್ಲಿ ದಂಗೆಯೆದ್ದಿತಾದರೂ, ಅದು ಫಲಕಾರಿಯಾಗಲಿಲ್ಲ. ಅದು ಸುಲಭವಾಗಿ ತುಳಿಯಲ್ಪಟ್ಟಿತು.

೧೯೩೪ನೆಯ ಮಧ್ಯದ ವೇಳೆಗೆ ಯುದ್ಧ ಬಹಳ ತೀವ್ರವಾಗಿತ್ತು. ಜುಲೈನಿಂದ ಅಕ್ಟೋಬರಿನ ವರೆಗೂ ಎರಡು ಪಕ್ಷಗಳಿಗೂ ಬಹಳ ನಷ್ಟವಾಯಿತು. ಜರ್ಮನ್ ಶಿಕ್ಷಣವಿದ್ದ ಚಿಯಾಂಗನ ಸೈನ್ಯ ಅಷ್ಟೊಂದು ಬಲಹೀನವಾಗಿರಲಿಲ್ಲ. ಕೆಂಪುಸೇನೆಗಳಿಗೆ ಯುದ್ಧ ಬಹಳ ಸಾವು ನೋವಿನದಾಯಿತು.

ಈ ಐದನೆಯ ಧಾಳಿಯಲ್ಲಿ ಚಿಯಾಂಗನು ಜಯಶಾಲಿಯಾಗಲು ಮುಖ್ಯ ಕಾರಣವೆಂದರೆ ಅವನಿಗೆ ವಿದೇಶೀಯರಿಂದ ದೊರೆತ ಸಹಾಯ. ಹೇಗಾದರೂ ಸರಿ ಕಮ್ಯುನಿಸ್ಟರ ಕೊನೆಯಾದರೆ ಸಾಕೆಂದು ಕಾದುಕೊಂಡಿದ್ದ ವಿದೇಶೀ ಸಾಮ್ರಾಜ್ಯಶಾಹಿಗಳು ಚಿಯಾಂಗನಿಗೆ ಆರ್ಥಿಕವಾಗಿಯೂ, ಸಂಗ್ರಾಮ ಸಾಮಗ್ರಿಗಳ ಮತ್ತು ಸಮರ ವಿಧಾನಗಳ ಕುರಿತಾದ ಸಲಹೆಗಳ ರೂಪವಾಗಿಯೂ ಸಹಾಯ ನೀಡಿದರು. ಅಲ್ಲದೆ ಸೋವಿಯಟ್‌ಗಳ ಮೇಲೆ ಹಾಕಿದ ಆರ್ಥಿಕ ಉರುಲು, ಅಡ್ಡಗೋಡೆ ಕೂಡ ಕೆಂಪುಸೇನೆಯ ಬಲ ಕುಗ್ಗಿಸಿತು. ಚಿಯಾಂಗನಿಗೆ ಸಂಪೂರ್ಣ ವಿಜಯ ದೊರೆಯಿತು. ಆದರೆ ಇದರಿಂದ ಅವನ ಮತ್ತು ಅವನ ಸಾಮ್ರಾಜ್ಯಶಾಹೀ ಗೆಳೆಯರ ಇಚ್ಛೆ ಮಾತ್ರ ಪೂರೈಸ

ಲಿಲ್ಲ. ಕಮ್ಯೂನಿಸ್ಟರ ಹೆಸರು ಅಳಿಸಿಹೋಗುವ ಬದಲು ಅವರ ಹೆಸರು ಜಗತ್ತಿನ ಇತಿಹಾಸದಲ್ಲಿ ಕೊನೆಯ ವರೆಗೂ ಉಳಿಯುವಂತಾಯಿತು. ದಕ್ಷಿಣ ಚೀನದ ಸೋವಿಯಟ್ ಪ್ರದೇಶಗಳನ್ನು ಬಿಟ್ಟು ಉತ್ತರ ದಿಗ್ಭಾಗಕ್ಕೆ ಚೀನೀ ಕಮ್ಯುನಿಸ್ಟರೂ ಕೆಂಪುಸೇನೆಗಳೂ ಬೆಟ್ಟ ಗುಡ್ಡಗಳು, ನದಿಗಳು ಮತ್ತು ಕೊಮಿಂಟಾಂಗ್ ಸೈನ್ಯಗಳನ್ನು ಭೇದಿಸಿಕೊಂಡು ಸಾಗಿದ ಮಹಾ ಯಾತ್ರೆಯು ಇತಿಹಾಸದಲ್ಲಿ ಹಿಂದೆಂದೂ ಕಾಣದುದನ್ನು ಕಮ್ಯುನಿಸ್ಟರು ಮಾಡಬಲ್ಲರೆಂಬುದಕ್ಕೆ ನಿದರ್ಶನ. ಈ ಮಹಾ ಯಾತ್ರೆಯಲ್ಲಿ ಕೆಂಪುಸೇನೆಗಳು ಪಟ್ಟ ಕಷ್ಟ ನಷ್ಟಗಳು, ಸಾವು ನೋವುಗಳನ್ನು ವರ್ಣಿಸುವುದು ಬಹಳ ಕಷ್ಟ. ಈ ೬೦೦೦ ಮೈಲಿಗಳ ಕಾಲ್ನಡಿಗೆಯ ಯಾತ್ರೆಯಲ್ಲಿ ಕೊಮಿಂಟಾಂಗ್ ವಿಮಾನಗಳ ಬಾಂಬುಗಳನ್ನೆದುರಿಸಬೇಕಾಗಿತ್ತು. ಒಂದುಕಡೆ ಕೊಮಿಂಟಾಂಗ್ ಭೂಸೈನ್ಯ. ಮತ್ತೊಂದು ಕಡೆ ಸುತ್ತಮುತ್ತ ಇದ್ದ ದರೋಡೆಗಾರರ ಕಾಟ. ಇವೆಲ್ಲಕ್ಕೂ ಶಿಖರಪ್ರಾಯವಾಗಿ ಸಾಕಷ್ಟು ಆಹಾರ ಸಾಮಗ್ರಿಗಳಿಲ್ಲದೆ ಹುಲ್ಲು, ಕಪ್ಪೆ ಕೊನೆಗೆ ಇಲಿಗಳನ್ನು ಕೂಡ ತಿನ್ನುವ ಸ್ಥಿತಿ. ನಡೆಯುತ್ತ ನಡೆಯುತ್ತ ಪೆಟ್ಟು ತಿಂದವರಿಗೆ ಸಾಕಷ್ಟು ಉಪಚಾರಗಳಿರಲಿಲ್ಲ. ಎಷ್ಟೋ ಸೇನೆಗಳು ಹಿಂದೆಯೇ ಬಿದ್ದು ನಾಶವಾಗಿ ಹೋದುವು. ಹೆಂಗಸರು ಮಕ್ಕಳು ನೂರಾರು ಮೈಲಿಗಳು ನಡೆದು, ಮಧ್ಯೆ ಕುಂದಿ ಸಾಯುತ್ತಿದ್ದರು. ಇಷ್ಟಾದರೂ ಕೆಂಪುಸೇನೆಗಳು ಎದೆಗುಂದದೆ ೧ ವರ್ಷದ ಕಾಲದಲ್ಲಿ ದಕ್ಷಿಣ ಚೀನದಿಂದ ಉತ್ತರಕ್ಕೆ ೬೦೦೦ ಮೈಲಿಗಳಷ್ಟು ದೂರ ಕಾಲ್ನಡೆಯಲ್ಲಿಯೇ ನಡೆದು ತಮ್ಮ ಮಹಾ ಯಾತ್ರೆಯನ್ನು ಮುಗಿಸಿ ಅಲ್ಲಿ ತಮ್ಮ ನೆಲೆಯೂರಿ ಪ್ರಬಲರಾದರು. ಚಿಯಾಂಗ್ ಮತ್ತು ಅವನ ಸಾಮ್ರಾಜ್ಯಶಾಹೀ ಗೆಳೆಯರೆಣಿಸಿದಂತೆ ಇವರು ಅಳಿಸಿ ಹೋಗುವ ಬದಲು ಕಷ್ಟದ ಬೆಂಕಿಯಲ್ಲಿ ಹಾದು ಮತ್ತೂ ಗಟ್ಟಿಯಾದರು, ಅಚಲರಾದರು. ಪ್ರತಿಯೊಂದು ಹೆಜ್ಜೆಗೂ ಯುದ್ಧ ಮಾಡಿಕೊಂಡೇ ಮುನ್ನಡೆಯಬೇಕಾಗಿತ್ತು. ಒಂದು ತತ್ವಕ್ಕಾಗಿ, ಒಂದು ಧ್ಯೇಯ ಸಾಧನೆಗಾಗಿ ದೃಢ ನಿಶ್ಚಯ ಮತ್ತು ಅಚಲ ಭಕ್ತಿಯ ಜನ ಎಂತಹ ಕಷ್ಟವನ್ನಾದರೂ ಎದುರಿಸಬಲ್ಲರೆಂಬುದಕ್ಕೆ ಈ ಮಹಾ ಯಾತ್ರೆಯೇ ಹಿರಿಯ ನಿದರ್ಶನ. ಇದೊಂದು ಕಲಿಯುಗದ ಪವಾಡವೆಂದರೆ ಅತಿಶಯೋಕ್ತಿಯಲ್ಲ !

ಈ ಕಾಲದಲ್ಲಿ ಚೀನೀ ಸೋವಿಯಟ್‌ಗಳ ಜೀವನ ಮತ್ತು ರಾಜಕೀಯ

ನೀತಿಯನ್ನು ತಿಳಿಯಲು ೧೯೩೪ ನೆಯ ಜನವರಿಯಲ್ಲಿ ಚೀನದ ಸೋವಿಯಟ್‌ಗಳ ಎರಡನೆಯ ಸಮ್ಮೇಳನದ ಅಧ್ಯಕ್ಷ ಮಾತ್ಸೇ ತುಂಗನ ಭಾಷಣ ಬಹಳ ಸಹಕಾರಿಯಾಗಿದೆ.

"ಸೋವಿಯಟ್ ಭೂಮಿಯಲ್ಲಿ ಹೆಣ್ಣು ಗಂಡೆನ್ನದೆ ಎಲ್ಲಾ ದಲಿತ ಜನರಿಗೂ ಮತ ಕೊಡುವ ಹಕ್ಕಿದೆ. ೧೯೩೧ ರಲ್ಲಿನ ಎರಡು ಚುನಾವಣೆಗಳಲ್ಲೂ, ೧೯೩೩ ರ ಚುನಾವಣೆಯಲ್ಲೂ ಸೇಕಡ ೮೦ ರಷ್ಟು ಮಂದಿ ಮತದಾನ ಕೊಟ್ಟರು."

ಚೀನದ ಮತ್ತೆ ಯಾವ ಪ್ರದೇಶದಲ್ಲಿಯೂ ಈ ರೀತಿ ಪ್ರಜಾಪ್ರಭುತ್ವದ ನೀತಿಯಿರಲಿಲ್ಲ. ಚಿಯಾಂಗ್ ಕೂಡ ಕೊಮಿಂಟಾಂಗಿನ ಚುನಾಯಿತ ನಾಯಕನಲ್ಲ. ಆದರೆ ಸೋವಿಯಟ್ ಪ್ರದೇಶಗಳಲ್ಲಿ ಎಲ್ಲರಿಗೂ ಚುನಾವಣೆಗೆ ನಿಲ್ಲುವ ಮತ್ತು ಮತ ಕೊಡುವ ಹಕ್ಕು ಇತ್ತು. ಜಮೀನುದಾರರ ಭೂಮಿಯನ್ನೆಲ್ಲ ಕಿತ್ತುಕೊಂಡು ಅದನ್ನು ರೈತರಿಗೆ ಸೋವಿಯಟ್ ಸರ್ಕಾರವು ಹಂಚುತ್ತಿತ್ತು. ಇವರಿಗೆ ರೈತರು ಕೊಡಬೇಕಾದ ಸಾಲವನ್ನೆಲ್ಲಾ ವಜಾ ಮಾಡಿದ್ದರು. ಶೋಷಕ ವರ್ಗದ ಜಮೀನುದಾರರಿಗೆ ಮತ ಕೊಡುವ ಹಕ್ಕಿರಲಿಲ್ಲ. ಅಲ್ಲದೆ ಚೀನದಲ್ಲಿ ಮೊಟ್ಟಮೊದಲ ಬಾರಿ ಸ್ತ್ರೀಯರಿಗೂ ಪುರುಷರ ಸಮಾನ ಹಕ್ಕು ಕೊಟ್ಟವರೆಂದರೆ ಚೀನೀ ಸಮಾಜವಾದಿಗಳು. ಈಗಲೂ ಕೊಮಿಂಟಾಂಗಿರುವ ಕಡೆಯಲ್ಲಿ ಚೀನೀ ಹೆಂಗಸರಿಗೆ ಪುರುಷರ ಸಮಾನ ಹಕ್ಕುಗಳಿಲ್ಲ. ಆದರೆ ಸೋವಿಯಟ್‌ಗಳಲ್ಲಿ ಮತ್ತು ಈಗಿನ ಕಮ್ಯುನಿಸ್ಟ್ ಪ್ರದೇಶವಾದ ಷೆನ್ಸಿ-ಕಾನ್ಸು-ನಿಂಗ್ಸಿಯ ಗಡಿನಾಡಿನಲ್ಲಿಯೂ ೧೬ ವರ್ಷಕ್ಕೆ ಮೇಲ್ಪಟ್ಟ ಪ್ರತಿಯೊಬ್ಬರಿಗೂ ಹೆಣ್ಣಾಗಲಿ, ಗಂಡಾಗಲಿ ಮತಕೊಡುವ ಹಕ್ಕಿದೆ.

ಸೋವಿಯಟ್ ನೀತಿ ಜನರ ಭುಜಬಲವನ್ನು ಮಾತ್ರವೇ ಅಲ್ಲದೆ ಬುದ್ಧಿಬಲವನ್ನೂ ಕೂಡ ಹೆಚ್ಚಿಸಿತು. ಎಲ್ಲಾ ಕಡೆಯಲ್ಲಿಯೂ ಶಾಲೆಗಳು ತೆರೆಯಲ್ಪಟ್ಟುವು. ಮುದುಕರು ಕೂಡ ರಾತ್ರಿಶಾಲೆಗಳಲ್ಲಿ ಕಲಿಯುತ್ತಾರೆ. ವಿದ್ಯಾಭ್ಯಾಸದ ವಿಷಯವಾಗಿ ಬಹಳ ಕೆಲಸ ನಡೆಸಿದುದರ ಫಲವಾಗಿ ನಿರಕ್ಷರತೆ ನಿರ್ಮೂಲವಾಗಿದೆ.

ಮಾತ್ಸೇ ತುಂಗನ ಲೆಕ್ಕಾಚಾರದಂತೆ, ೧೯೩೪ ರಲ್ಲಿ 'ಕೊಮಿಂಟಾಂಗಿನ

ಆಡಳಿತದಲ್ಲಿ ಶೇಕಡ ೮೦ ಮಂದಿ ನಿರಕ್ಷರಕುಕ್ಷಿಗಳಾಗಿದ್ದಾರೆ. ಆದರೆ ನಮ್ಮ ಆಡಳಿತದಲ್ಲಿರುವ ಕಿಯಾಂಗ್ಸಿ, ಫ್ಯೂಕೈನ್ ಮತ್ತು ಚಿಕಿಯಾಂಗ್ ಪ್ರಾಂತ್ಯಗಳಲ್ಲಿ ೪೯೩೧ ಹಳ್ಳಿಗಳಿಗೆ ಒಟ್ಟು ೩೦೫೨ ಪ್ರಾಥಮಿಕ ಶಾಲೆಗಳಿವೆ. ಈ ಶಾಲೆಗಳಲ್ಲಿ ಒಟ್ಟು ೮೯೨೧೦ ಹುಡುಗ ಹುಡುಗಿಯರು ವ್ಯಾಸಂಗ ಮಾಡುತ್ತಿದ್ದಾರೆ. ೯೪,೫೧೨ ಮಂದಿ ವಿದ್ಯಾರ್ಥಿಗಳುಳ್ಳ ೬೪೬೩ ರಾತ್ರಿಶಾಲೆಗಳಿವೆ. ೧೫೫,೩೨೧ ಜನ ಸದಸ್ಯರುಳ್ಳ ವ್ಯಾಸಂಗ ಗೋಷ್ಠಿಗಳಿವೆ. ೬೯೬೮೮ ಮಂದಿ ಕಾರ್ಮಿಕ ಸದಸ್ಯರುಳ್ಳ ೧೬೫೬ ವಿಹಾರ ಮಂದಿರಗಳಿವೆ. ಕೇಂದ್ರ ಸೋವಿಯಟ್ ಪ್ರಾಂತ್ಯದಲ್ಲಿಯೇ ೩೪ ವೃತ್ತಪತ್ರಿಕೆಗಳಿವೆ." ಈ ಸಂಖ್ಯೆಗಳೇ ನಮಗೆ ಸೋವಿಯಟ್ ವಿದ್ಯಾಭ್ಯಾಸದ ನೀತಿಯನ್ನು, ಅದರ ಪ್ರಗತಿಯನ್ನು ತೋರುವ ನಿದರ್ಶನಗಳು. ಇದಲ್ಲದೆ ಕೆಂಪುಸೇನೆಯ ಶಿಕ್ಷಣಾಲಯ, ವಿಶ್ವವಿದ್ಯಾನಿಲಯಗಳು, ಸೋವಿಯಟ್ ವಿಶ್ವವಿದ್ಯಾನಿಲಯಗಳು, ಕಮ್ಯುನಿಸ್ಟ್ ವಿಶ್ವವಿದ್ಯಾನಿಲಯಗಳು ಮತ್ತು ಅಸಂಖ್ಯಾತ ಪ್ರೌಢ ಶಾಲೆಗಳೂ ಸ್ಥಾಪಿತವಾಗಿ ಜನರ ಬುದ್ಧಿಬಲವನ್ನು ಬೆಳೆಸುವ ಕಾರ್ಯವನ್ನು ನೆರವೇರಿಸುತ್ತಿವೆ.

ಚೀನದಲ್ಲಿ ಮತ್ತೊಂದು ದುಷ್ಪದ್ಧತಿಯಿದ್ದುದನ್ನು ಸೋವಿಯಟ್ ಸರ್ಕಾರಗಳು ಪರಿಹರಿಸಿದುವು. ಚೀನೀ ಹೆಂಗಸರು ಸರಕುಗಳಂತೆ ಮಾರಾಟವಾಗುತ್ತಿದ್ದರು. ಹೆಣ್ಣಿಗೆ ಯಾವ ಸ್ವಾತಂತ್ರ್ಯವೂ ಇಲ್ಲದೆ, ಯಜಮಾನ ಹೇಳಿದಂತೆ ಕೇಳಬೇಕಾಗುತ್ತಿತ್ತು. ಬಾಲ್ಯವಿವಾಹ ಕೂಡ ಅತಿಯಾಗಿತ್ತು. ಸೋವಿಯಟ್ ಸರ್ಕಾರ ಈ ಪದ್ಧತಿಗಳನ್ನು ತೆಗೆದುಹಾಕಿ, ಮದುವೆ ಮತ್ತು ದಾಂಪತ್ಯ ವಿಚ್ಛೇದನಗಳಲ್ಲಿ ಸ್ತ್ರೀಗೆ ಪುರುಷನಷ್ಟೇ ಸ್ವಾತಂತ್ರ್ಯ ಕೊಟ್ಟಿತು. ರಾಷ್ಟ್ರೀಯ ಅಲ್ಪಸಂಖ್ಯಾಕರಾದ ಮಂಗೋಲರು, ಟಿಬೆಟಿನವರು ಮುಂತಾದವರನ್ನು ಕೊಮಿಂಟಾಂಗು ಸದೆಬಡಿದು ಅವರ ಹಕ್ಕುಗಳನ್ನು ಒಪ್ಪಿಕೊಳ್ಳದೆ ತುಳಿಯುತ್ತಿದ್ದಿತು. ಆದರೆ ಸೋವಿಯಟ್ ಸರ್ಕಾರ ಎಲ್ಲಾ ಅಲ್ಪಸಂಖ್ಯಾಕರ ಸ್ವಯಂನಿರ್ಣಯಾಧಿಕಾರವನ್ನು ಒಪ್ಪಿಕೊಂಡಿತು.

ತೆರಿಗೆ ವಸೂಲಿಯಲ್ಲೂ ಕೂಡ ಇದೇ ನೀತಿಯನ್ನು ಸೋವಿಯಟ್ ಸರ್ಕಾರವು ಅನುಸರಿಸಿದೆ. ಕೊಮಿಂಟಾಂಗಿನ ಸರ್ಕಾರವು ಜನಗಳಿಂದ ೧೨೫೬ ಬೇರೆ ಬೇರೆ ರೀತಿಯ ಕಂದಾಯವನ್ನು ವಸೂಲು ಮಾಡುತ್ತಿತ್ತು. ಜೆಕ್ವಾನ್ ಪ್ರಾಂತ್ಯದಲ್ಲಿಯಂತೂ ೧೯೮೨ನೆಯ ವರ್ಷದ ವರೆಗಣ ಭೂ

ಕಂದಾಯವನ್ನು ಮುಂಗಡ ವಸೂಲು ಮಾಡಿಕೊಂಡಿತ್ತು. ಸೋವಿಯಟ್ ಸರ್ಕಾರವು ಎಲ್ಲಾ ರೀತಿಯ ತೆರಿಗೆಗಳನ್ನು ವಜಾ ಮಾಡಿ ಭೂಕಂದಾಯ ಮಾತ್ರ ಉಳಿಸಿದೆ. ಶೋಷಕ ವರ್ಗದಿಂದ ಮಾತ್ರ ವಾಣಿಜ್ಯ ಕಂದಾಯವೂ ವಸೂಲಾಗುತ್ತಿದೆ.

. ಕಾರ್ಮಿಕರ ಜೀವನದ ಮಟ್ಟವೇರಲಾರಂಭಿಸಿತು. ಅವರಿಗೆ ೧೯೨೭ಕ್ಕೆ ಮುಂಚೆ ದೊರೆಯುತ್ತಿದ್ದ ಪ್ರತಿಫಲಕ್ಕೆ ನೂರರಷ್ಟು ಪ್ರತಿಫಲ ೧೯೩೭ರ ನಂತರ ದೊರೆಯುತ್ತಿತ್ತು.

ಈ ಎಲ್ಲ ವಿಷಯಗಳಿಂದ ಸೋವಿಯಟ್ ಸರ್ಕಾರವು ಜನತೆಗೆ ಯಾವ ರೀತಿಯಲ್ಲಿ ಸಹಾಯ ಮಾಡಿತೆಂಬುದು ಸ್ಪಷ್ಟವಾಗುತ್ತದೆ. ಸೋವಿಯಟ್ ಸರ್ಕಾರ ಜನಪ್ರಿಯವಾಗಲು ಕಾರಣವೇನೆಂದು ಪ್ರಶ್ನಿಸುವವರಿಗೆ ಉತ್ತರ ವಿಷ್ಟೆ—ಅದು ಜನರ ಸರಕಾರ; ಜನವೇ ಸರಕಾರ. .ಚಿಯಾಂಗನು ಚೀನೀ ಕಮ್ಯುನಿಸ್ಟರನ್ನು ನಿರ್ನಾಮಗೊಳಿಸಲು ನಡೆಸಿದ ಪ್ರಯತ್ನಗಳೆಲ್ಲ ಹೊಗೆಯ ಬರೆಹದಂತಾಗಲೂ ಕಾರಣ ಇದೇ! ಆದರಿಂದಲೇ ಮಹಾ ಯಾತ್ರೆಯಲ್ಲಿ ೧೦–೧೨ ವರ್ಷದ ಮಕ್ಕಳು ಕೂಡ ಕೆಂಪುಸೇನೆಗಳಿಗೆ ಸಹಾಯ ಮಾಡುತ್ತಾ ಅವರ ಹಿಂದೆಯೇ ೬೦೦೦ ಮೈಲಿಗಳನ್ನು ಕಾಲ್ನಡೆಯಲ್ಲಿಯೇ ಸಾಗಿ ಉತ್ತರಕ್ಕೆ ನಡೆದುದು.

ಈ ೧೦ ವರ್ಷಗಳ ಅಗ್ನಿಪರೀಕ್ಷೆಯಿಂದ ಕಮ್ಯುನಿಸ್ಟರ ಪ್ರಭಾವ ತುಂಬಾ ಬೆಳೆಯಿತು. ಇದರಿಂದ ಕಮ್ಯುನಿಸ್ಟ್ ಪಕ್ಷ ಕೊಮಿಂಟಾಂಗ್ ಪಕ್ಷವನ್ನು ಸರಿಗಟ್ಟುವಷ್ಟೇ ಬಲಶಾಲಿಯಾಗಿದೆ ಎಂಬುದು ಎಲ್ಲರಿಗೂ ವಿಶದವಾಯಿತು. ೧೯೨೭ರ ಮೊದಲು ಸಣ್ಣ ಒಂದು ಗುಂಪಾಗಿದ್ದ ಈ ಪಾರ್ಟಿ ೧೯೩೭ರ ವೇಳೆಗೆ ಬಹಳ ಪ್ರಬಲ ಮತ್ತು ಪ್ರಭಾವಶಾಲಿ ಪಕ್ಷವಾಯಿತು. ಈ ಪರೀಕ್ಷೆಯ ಫಲವಾಗಿ ಕೆಂಪುಸೈನ್ಯವೂ ಒಂದು ರಾಷ್ಟ್ರೀಯ ಸೈನ್ಯವಾಯಿತು. ೧೯೨೭ರಲ್ಲಿ ಇಲ್ಲದ ಇದು ೧೯೩೭ರ ವೇಳೆಗೆ ಚೀನದಲ್ಲೆಲ್ಲ ಅತಿ ಶ್ರೇಷ್ಠ ಸೈನ್ಯವಾಗಲು ಈ ೧೦ ವರ್ಷದ ಅನುಭವವೇ ಮುಖ್ಯ ಕಾರಣ. ಸೋವಿಯಟ್ ನೀತಿಯ ಸಾಫಲ್ಯದಿಂದ ಚೀನದ ಕಾರ್ಮಿಕರ ಮತ್ತು ರೈತರ ಮೇಲೆ ಪಾರ್ಟಿಯ ಪ್ರಭಾವ ತುಂಬಾ ಆಯಿತು. ಎಷ್ಟೋ ಕಡೆಯಲ್ಲಿ ೧೯೩೭ರಲ್ಲಿ ಸ್ಥಾಪಿತವಾದ ಸೋವಿಯಟ್ ಪ್ರಾಂತ್ಯಗಳು ಈಗಲೂ ಉಳಿದಿವೆ.

ಈ ಹತ್ತು ವರ್ಷಗಳ ಅಚಲ ಹೋರಾಟದ ಪ್ರಭಾವವೆಂದರೆ—ಪ್ರತಿಗಾಮಿಯಾಗಿದ್ದ ಕೊಮಿಂಟಾಂಗ್ ಚೀನದ ಕಮ್ಯುನಿಸ್ಟರನ್ನು ತೀವ್ರ ವಿರೋಧಿಯನ್ನಾಗಿ ಪರಿಗಣಿಸಿ, ಅದನ್ನು ನಿರ್ನಾಮಗೊಳಿಸಲು ಯತ್ನಿಸಿ ವಿಫಲವಾಗಿ ಕಮ್ಯುನಿಸ್ಟ್ ಪಾರ್ಟಿಯೂ ಅಜೇಯವೆಂದು ಗಣಿಸಿದುದು. ಈ ಅನುಭವದ ಫಲವಾಗಿಯೇ ಚೀನವು ಒಂದುಗೂಡಿ ಜಪಾನಿನ ಮೇಲೆ ಸಂಗ್ರಾಮ ಹೂಡಿ ಜಪಾನೀ ಸಾಮ್ರಾಜ್ಯಶಾಹಿಯನ್ನು ವಿರೋಧಿಸುವಂತಾಯಿತು. ಕೊನೆಯದಾಗಿ ಪ್ರತಿಗಾಮಿ ನೀತಿಯು ಜನತೆಯ ಮುಂದೆ ಎಂದೂ ಉಳಿಯಲಾರದು. ಜನತೆಯ ಶಕ್ತಿಯು ಎಲ್ಲೆಲ್ಲಿಯೂ ಎದ್ದು ತನ್ನದನ್ನು ತನ್ನದಾಗಿಸಿಕೊಳ್ಳುತ್ತದೆ. ಅದನ್ನು ಯಾವ ಶಕ್ತಿಯೇ ಆಗಲಿ ತಡೆಯಲಾರದೆನ್ನುವುದು ಸ್ಥಿರವಾಯಿತು.

## ಜಪಾನಿನೊಂದಿಗೆ ಸಂಗ್ರಾಮ

ತಮ್ಮ ಚಕ್ರವರ್ತಿ ಸೂರ್ಯದೇವತೆಯ ವಂಶದವನು, ತಾವೆಲ್ಲರೂ ಅವನ ವಿಶೇಷ ಪರಿವಾರ ಎಂಬ ಅಂಧನಂಬಿಕೆ ಜಪಾನರಿಗೆ. ಈ ಮಾನಸಿಕ ಬಂಧನದ ಫಲವಾಗಿ ಜಪಾನಿನಲ್ಲಿ ಫಾಸಿಸಂ ಬೆಳೆಯಲು ಅನುಕೂಲವಾಯಿತು. ಜರ್ಮನಿಯಲ್ಲಿ ಹೇಗೆ ಹಿಟ್ಲರ್ ಜನರ ಮನಸ್ಸಿನ ಮೇಲೆ 'ಆರ್ಯ' ಜನಾಂಗ ನೀತಿಯ ಎರಕ ಹೊಯಿದು ಅವರ ವಿಚಾರಶಕ್ತಿಯನ್ನು ಅಡಗಿಸಿದನೋ ಅದೇ ರೀತಿ ಜಪಾನಿನ ಜನರಲ್ಲಿ ಕೂಡ ತಾವೇ ಜಗತ್ತಿನಲ್ಲೆಲ್ಲ ಸರ್ವಶ್ರೇಷ್ಠರೆನ್ನುವ ಭಾವ ಮೂಡಿಸಲಾಗಿದೆ. ಎಂತಲೇ ಉಳಿದವರು ತಮ್ಮ ಊಳಿಗದಾಳುಗಳಾಗಬೇಕು ಎಂಬ ದುರಹಂಕಾರವೂ ಅವರಿಗಿದೆ. ತಾವಾಗೇ ಮಣಿದು ಬಾಗದವರನ್ನು ಮೆಟ್ಟಿ ತುಳಿದು, ಅವರು ತಮ್ಮ 'ಕೃಪಾಛತ್ರ'ದಡಿ ಬರುವಂತೆ ಮಾಡುವುದು ತಮ್ಮ ಪವಿತ್ರ ಕರ್ತವ್ಯ ಎಂದು ನಂಬಿದ್ದಾರೆ ಜಪಾನರು. ಜಪಾನಿನಲ್ಲಿ ಚಿಕ್ಕ ಮಕ್ಕಳಿಗೆ ಕೂಡ ಇದನ್ನು ಕಲಿಸುತ್ತಾರೆ. ಶಾಲೆಯ ಪುಸ್ತಕಗಳಲ್ಲಿಯೂ ಇದೇ ಬೋಧನೆ.

"ನಾವು ನಮ್ಮ ರಾಜಧಾನಿಯನ್ನು ಜಗತ್ತಿನ ರಾಜಧಾನಿಯಾಗಿ ಮಾಡಿ ಜಗತ್ತನ್ನು ನಮ್ಮ ಅಧೀನ ಪ್ರಾಂತವನ್ನಾಗಿಸಿಕೊಳ್ಳಬೇಕು" ಎನ್ನುವುದೇ ಜಪಾನೀ ಬಾಲಕನಿಗೆ ದೊರೆವ ಪ್ರಥಮ ಪಾಠ. "ಜಪಾನೀ ಜನ ದೇವಾಂಶಸಂಭೂತರು. ಪ್ರಪಂಚದ ಉಳಿದೆಲ್ಲ ದೇಶಗಳ ಜನಗಳಿಗಿಂತ ಧೈರ್ಯ,

ಬುದ್ಧಿ ಮತ್ತು ಉಳಿದೆಲ್ಲಾ ವಿಷಯಗಳಲ್ಲಿಯೂ ಅತಿ ಶ್ರೇಷ್ಠ"ರಾದುದರಿಂದ ಜಪಾನಿಗೆ "ಪ್ರಪಂಚದ ಎಲ್ಲಾ ಜನಾಂಗಗಳನ್ನೂ ತನ್ನ ಅಧಿಕಾರದಲ್ಲಿಟ್ಟು ಕೊಳ್ಳುವುದು ಆಜನ್ಮಸಿದ್ಧ ಹಕ್ಕು"

"ಇದುವರೆಗೂ ಜಪಾನ್ ಮತ್ತು ಬೇರೆ ದೇಶಗಳೆನ್ನುತ್ತಿದ್ದರು.

ಇನ್ನು ಮೇಲೆ ಬರಿಯ ಜಪಾನ್ ಎಂದು ಮಾತ್ರ ಕರೆಯುವರು."

ಇದು ಜಪಾನೀ ಬಾಲಕರು ಹಾಡುವ ಹಾಡು. ಅಂದೂ ಜಪಾನಿನ ಸಾಮ್ರಾಜ್ಯಶಾಹೀ ಬಂಡವಾಲಿಗರು ತಮ್ಮ ನೀತಿಯನ್ನು ಅನುಷ್ಠಾನಕ್ಕೆ ತರಲು ಜನರಿಗೆ ಹುಟ್ಟಿದಾಗಿನಿಂದ ಈ ಅನೀತಿಯ ಪಾಠಗಳನ್ನೇ ಅರೆದು, ಕುಡಿಸಿ, ಕಲಿಸಿ ಅವರನ್ನು ತಮ್ಮ ದಾರಿಗೆ ಪಳಗಿಸಿಕೊಂಡಿದಾರೆ.

"ನಮ್ಮ ಸಾಮ್ರಾಜ್ಯ ನೀತಿಯು ಪ್ರಪಂಚದ ಎಲ್ಲ ಕಡೆಯಲ್ಲಿಯೂ ಹರಡಬೇಕು. ಬಲ ಪ್ರಯೋಗಿಸಿಯಾದರೂ ಇದಕ್ಕೆ ಬರುವ ಅಡ್ಡಿಗಳನ್ನೆಲ್ಲ ತೊಡೆದು ಹಾಕಬೇಕು. ಪೂರ್ವ ಏಷ್ಯದ ಜನಾಂಗಗಳನ್ನೂ, ದೇಶಗಳನ್ನೂ ಉದ್ಧಾರ ಮಾಡುವುದೇ ಜಪಾನಿನ ಪವಿತ್ರ ಕಾರ್ಯ" ಎಂದಿದಾನೆ ಯುದ್ಧ ಮಂತ್ರಿ ಜನರಲ್ ಅರಾಕಿ. ಈ ಸುತ್ತುಬಳಸಿನ, ಹುಳುಕಿನ ಮಾತನ್ನೂ ನೇರವಾಗಿ ಹೇಳುವುದಾದರ ಜಪಾನಿನ ಆರ್ಥಿಕ ಮುನ್ನಡೆಯಾಗಬೇಕಾದರೆ ಜಪಾನಿಗೆ ಅಧೀನ ಪ್ರಾಂತ್ಯಗಳು, ವಸಾಹತುಗಳು ಬೇಕು. ಅವನ್ನು ಹೇಗಾದರೂ ಸರಿ, ಜಪಾನು ವಶಪಡಿಸಿಕೊಳ್ಳುತ್ತದೆ."

೧೯೨೭ರಲ್ಲಿ ಮುಖ್ಯ ಮಂತ್ರಿಯಾಗಿದ್ದ ಬ್ಯಾರನ್ ಟನಾಕಾ ಚಕ್ರವರ್ತಿಗೆ ಒಂದು ಬಿನ್ನಹವನ್ನು ಒಪ್ಪಿಸಿದನು. ಅದೇ ಈಗ ಇತಿಹಾಸ ಪ್ರಸಿದ್ಧವಾದ "ಟನಾಕಾ ವರದಿ." ಜಪಾನೀ ಬಂಡವಾಲ ಮತ್ತು ಸಾಮ್ರಾಜ್ಯ ಬೆಳೆಯಬೇಕಾದರೆ ಅನುಸರಿಸಬೇಕಾದ ನೀತಿಯನ್ನು ಅವನು ಅದರಲ್ಲಿ ವಿಶದೀಕರಿಸಿದ್ದಾನೆ. ಆಗಿನ್ನೂ ಮಂಚೂರಿಯವನ್ನು ಜಪಾನರು ಆಕ್ರಮಿಸಿರಲಿಲ್ಲ. ಮೊದಲು ಮಂಚೂರಿಯ ಮತ್ತು ಮಂಗೋಲಿಯಗಳನ್ನು ವಶಮಾಡಿಕೊಂಡು ಅಲ್ಲಿಂದ ಮುಂದೆ ಚೀನದ ಆಕ್ರಮಣ ನಡೆಸಿ, ಅದರ ಅಸಾಧ್ಯ ಸಹಜ ಸಂಪತ್ತನ್ನುಪಯೋಗಿಸಿಕೊಂಡು ಇಂಡೋ ಚೀನ, ಬರ್ಮ, ಫಿಲಿಪ್ಪೈನ್ ದ್ವೀಪಗಳು, ಭಾರತ ಮತ್ತು ಅವುಗಳ ಮೂಲಕ ಜಗತ್ತನ್ನೇ ಜಪಾನಿನ ಅಧೀನವಾಗಿ ಮಾಡಿಕೊಳ್ಳುವ ಯೋಜನೆಯೇ ಈ ಟನಾಕಾ ವರದಿಯ ಮುಖ್ಯ ಸೂತ್ರ.

ಜಪಾನೀ ಸಾಮ್ರಾಜ್ಯಶಾಹಿಗಳು ತಮ್ಮ ಸಾಮ್ರಾಜ್ಯದ ಬೆಳವಣಿಗೆಯ ಕಾರ್ಯವನ್ನು ೧೮೭೦ ರ ವೇಳೆಗೇ ಆರಂಭಿಸಿದ್ದರು. ಜಪಾನ್ ಪಾಶ್ಚಾತ್ಯ ರಾಷ್ಟ್ರಗಳ ಅನುಕರಣ ಮಾಡಲಾರಂಭಿಸಿದ ಕಾಲ ಅದು. ಮಂತ್ರಿಗಳು ವಿದೇಶಗಳಿಗೆ ಹೋಗಿ ಅಲ್ಲಿನ ರೀತಿ ನೀತಿಗಳನ್ನು, ಪದ್ಧತಿಗಳನ್ನು ನೋಡಿ ಕೊಂಡು ಹಿಂತಿರುಗಿ ಬಂದ ಮೇಲೆ ಜಪಾನು ತನ್ನ ಮೊದಲನೆಯ ಬಲಿ ಯನ್ನು ಕಸಿದುಕೊಂಡಿತು. ೧೮೭೨ರಲ್ಲಿ ಚೀನಕ್ಕೆ ಸೇರಿದ ಲೂಚೂ ದ್ವೀಪ ಗಳು ಜಪಾನಿನ ವಶವಾದುವು. ಚೀನೀ ಸಾಮ್ರಾಜ್ಯವು ತೆಪ್ಪಗಿದ್ದುದರಿಂದ ೧೮೭೪ರಲ್ಲಿ ಫಾರ್ಮೋಸಾದ ಆಕ್ರಮಣ ನಡೆಸಿ, ೧೮೭೫ರಲ್ಲಿ ಕೂರ್ರೈಲ್ ಮತ್ತು ಬಾನಿನ್ ದ್ವೀಪಗಳನ್ನು ವಶಪಡಿಸಿಕೊಂಡಿತು. ಈ ದ್ವೀಪಗಳೇ ಜಪಾನಿನ ಮುಂದಿನ ಆಕ್ರಮಣಗಳಿಗೆ ಮೆಟ್ಟಿಲುಗಳಾದುವು. ೧೮೯೪-೯೫ರಲ್ಲಿ ಚೀನದ ಮೇಲೆ ನಿಷ್ಕಾರಣವಾಗಿ ಯುದ್ಧ ಹೂಡಿ ಫಾರ್ಮೋಸಾ ದ್ವೀಪವನ್ನು ಕಸಿದುಕೊಂಡಿತು. ಚೀನ ಈ ಯುದ್ಧದಲ್ಲಿ ಸೋತಿತಾದುದರಿಂದ, ಜಪಾನು ಕ್ವಾಂಟುಂಗ್ ಪ್ರಾಂತ್ಯ, ಪೆಸ್ಕಡೋರಸ್ ಮತ್ತು ಫಾರ್ಮೋಸಾ ದ್ವೀಪಗಳನ್ನು ವಶಪಡಿಸಿಕೊಂಡಿತು. ಆದರೆ ಚೀನದಲ್ಲಿ ತಾವೂ ಶೋಷಣೆ ಮಾಡಲೆಂದೇ ಬಂದಿದ್ದ ಜರ್ಮನಿ, ಬ್ರಿಟನ್, ಅಮೆರಿಕಗಳು ಒತ್ತಾಯಪಡಿಸಿದುದರಿಂದ ಜಪಾನ್ ಚೀನಾಕ್ಕೆ ಕ್ವಾಂಟುಂಗ್ ಪ್ರಾಂತ್ಯವನ್ನು ಹಿಂದಕ್ಕೆ ಕೊಡಬೇಕಾಗಿ ಬಂತು. ಜಪಾನು ೧೦ ವರ್ಷಗಳ ಕಾಲ ತನ್ನ ಸೈನ್ಯವನ್ನು ಬಲಪಡಿಸಿ ಕೊಂಡು ೧೯೦೫ರಲ್ಲಿ ರಷ್ಯದ ಮೇಲೆ ಯುದ್ಧ ಹೂಡಿ ಅದನ್ನು ಸೋಲಿಸಿತು. ಇದರ ಫಲವಾಗಿ ಜಪಾನಿನ ಅಹಂಕಾರ ಹೆಚ್ಚಿ, ೧೯೧೦ರಲ್ಲಿ ಚೀನದಿಂದ ಕೊರಿಯವನ್ನು ಕಸಿದುಕೊಂಡಿತು.

ಜಗತ್ತಿನ ಪ್ರಥಮ ಮಹಾ ಯುದ್ಧದಲ್ಲಿ ಜಪಾನು ಮಿತ್ರರಾಷ್ಟ್ರ ಗಳೊಂದಿಗೇ ಸೇರಿಕೊಂಡಿತ್ತು. ಚೀನದಲ್ಲಿ ಜರ್ಮನರಿದ್ದ ಪ್ರದೇಶಗಳನ್ನು ತನ್ನ ವಶಪಡಿಸಿಕೊಂಡು, ಚೀನಕ್ಕೆ ಚೀನವನ್ನೇ ತನ್ನ ವಸಾಹತನ್ನಾಗಿ ಮಾಡಿ ಕೊಳ್ಳಲು, ಚೀನೀ ಸರ್ಕಾರಕ್ಕೆ ತನ್ನ ೨೧ ಕೇಳಿಕೆಗಳನ್ನು ಕೊಟ್ಟಿತು. ಆದರೆ ಆ ವೇಳೆಗಾಗಲೇ ಚೀನದಲ್ಲಿ ಜನಜಾಗೃತಿ ಆರಂಭವಾಗಿದ್ದುದರಿಂದ ಜಪಾನಿನ ಆಟ ಸಾಗಲಿಲ್ಲ. ತಾವು ಹೇಳಿದ ಮಾತನ್ನು ಕೇಳದ 'ಚೀನೀ ನಾಯಿಗಳಿಗೆ' ಬುದ್ಧಿ ಕಲಿಸುವ ಸಂಕಲ್ಪ ಮಾಡಿತು ಜಪಾನ್. ೧೯೩೧

ರಿಂದೀಚೆಗೆ ಜಪಾನ್ ಮತ್ತು ಬ್ರಿಟನ್‌ಗಳು ಒಂದಾಗಿ ಕಾರ್ಯ ನಡೆಸುತ್ತಿದ್ದುವು. ಜಪಾನು ಚೀನದಲ್ಲಿ ಕೊರಿಯವನ್ನಾಕ್ರಮಿಸುವುದಕ್ಕೆ ಬ್ರಿಟನ್ ಸಹಾಯ ಮಾಡಿತು. ೧೯೧೭ ರಲ್ಲಿ ರಷ್ಯನ್ ಕ್ರಾಂತಿಯಾದ ಮೇಲೆ ಬ್ರಿಟನ್ ಅಮೆರಿಕ ಮುಂತಾದ ರಾಷ್ಟ್ರಗಳ ಜತೆ ಸೇರಿ ಜಪಾನ್ ಕೂಡ ಸೋವಿಯಟ್ ರಷ್ಯಾದ ವಿರುದ್ಧವಾಗಿ ಹೋರಾಡಿತು. ಆದರೆ ಇವರಿಂದ ಜಪಾನಿಗೆ ಬಯಸಿದ ಫಲ ಸಿಗಲಿಲ್ಲ. ಮತ್ತೆ ಲಾಗ ತಪ್ಪಿತು. ೧೯೨೨ ರ ವಾಷಿಂಗ್ಟನ್ ಸಮ್ಮೇಳನದಲ್ಲಿ ಜಪಾನು ಬ್ರಿಟನ್, ಅಮೆರಿಕಗಳಷ್ಟೇ ಜಲಸೈನ್ಯವನ್ನಿಟ್ಟುಕೊಳ್ಳಲು ಅವಕಾಶ ಕೇಳಿತು; ಆದರೆ ಅದೂ ಸಿಗಲಿಲ್ಲ. ಅರೆಮನಸ್ಸಿನಿಂದ ನವರಾಷ್ಟ್ರಗಳ ಕರಾರಿಗೆ ಸಹಿ ಹಾಕಿ ಜಪಾನ್ ತನ್ನ ಸೈನ್ಯಬಲವನ್ನು ಬೆಳಸಲಾರಂಭಿಸಿತು. ೧೯೨೭ ರಲ್ಲಿ ಚೀನದ ಷಾಂಟುಂಗ್ ಪ್ರಾಂತ್ಯವನ್ನು ಆಕ್ರಮಿಸಲು ಯತ್ನಿಸಿ ಹಿಮ್ಮೆಟ್ಟಬೇಕಾಯಿತು.

೧೯೨೭ರಲ್ಲಿ ಚೀನ ಕಮ್ಯುನಿಸ್ಟ್ ಮತ್ತು ಕೊಮಿಂಟಾಂಗ್ ಎಂದು ಭಿನ್ನವಾದುವನ್ನು ಕಂಡು ಜಪಾನಿಗೆ ಸಹಜವಾಗಿ ಬಹಳ ಸಂತೋಷವಾಯಿತು. ಈ ಅನೈಕ್ಯವನ್ನೇ ಸಾಧನವಾಗಿಟ್ಟುಕೊಂಡು ತನ್ನ ರಾಜ್ಯದಾಹ ತೀರಿಸಿಕೊಳ್ಳುವ ಯೋಜನೆ ಹಾಕಿತು ಜಪಾನ್. ಬ್ಯಾರನ್ ಟನಾಕಾ ತನ್ನ ವರದಿಯನ್ನೊಪ್ಪಿಸಿದುದು ಆ ಸಮಯದಲ್ಲಿ. ಜಪಾನಿಗೆ ಮಂಚೂರಿಯ ಬೇಕಾಗಿತ್ತು. ಮಂಚೂರಿಯ ಜಪಾನಿನ ಪ್ರಾಣವಂತೆ! ೧೯೩೦ ರಲ್ಲಿ ಲಂಡನ್‌ನಲ್ಲಿ ನಾವೆಯ ಒಪ್ಪಂದಕ್ಕೆ ಸಹಿ ಹಾಕಿದ ಹಮಾಗುಚಿಯನ್ನು ಜಪಾನೀ ಒಂಡವಾಲಿಗರು ಕೊಲೆಮಾಡಿದರು. ಕಾರಣವಿಷ್ಟೇ, ಆ ಒಪ್ಪಂದದಂತೆ ಜಪಾನಿನ ನಾವೆಯನ್ನು ಬಹಳ ಹೆಚ್ಚಿಸುವುದು ಅಸಾಧ್ಯವಾಗಿತ್ತು. ಜಪಾನಿನ ನಾವೆಯ ಬಲ ಇಷ್ಟೇ ಇರಬೇಕೆಂದು ಆ ಒಪ್ಪಂದದಲ್ಲಿ ತೀರ್ಮಾನವಾಗಿತ್ತು! ಅಂತೂ ಒಪ್ಪಂದದ ಮೇಲಿನ ಸಿಟ್ಟಿಗೆ, ಒಪ್ಪಂದಕ್ಕೆ ಸಹಿಮಾಡಿದವ ತುತ್ತಾದ. ೧೯೩೧ ರಲ್ಲಿ ಜಪಾನಿಯರು ಮಂಚೂರಿಯವನ್ನಾಕ್ರಮಿಸಿಕೊಂಡರು. ಲೀಗ್ ಆಫ್ ನೇಷನ್ಸಿನಲ್ಲಿ ಚೀನದ ಪ್ರತಿನಿಧಿಯೂ ರಷ್ಯದ ಪ್ರತಿನಿಧಿಯೂ ಅದನ್ನು ಖಂಡಿಸುವ ನಿರ್ಣಯ ತಂದಾಗ ಜಪಾನಿನ ಪರವಾಗಿ ಬ್ರಿಟನ್ನಿನ ಪ್ರತಿನಿಧಿ ಸರ್ ಜಾನ್ ಸೈಮನ್ ಭಾಷಣ ಮಾಡಿದ. "ಜಪಾನು ಮಾಡಿದ ಕಾರ್ಯ ಸರಿ. ಜಪಾನಿಗೂ ವಸಾಹತುಗಳು ಬೇಕು" ಎಂದು ಆತ

ಸಾಧಿಸಿದ. ಆ ಮೇಲೆ ಜಪಾನೀ ಪ್ರತಿನಿಧಿ ಸ್ಟೈಮಸ್‌ಗೆ "ನೀನು ಜಪಾನಿನ ಪರವಾಗಿ ಮಾತನಾಡಿದಷ್ಟು ಪರಿಣಾಮಕಾರಿಯಾಗಿ ನನ್ನಿಂದ ಕೂಡ ಮಾತನಾಡಲು ಸಾಧ್ಯವಿಲ್ಲ" ಎಂದು ಹೇಳಿದನಂತೆ.

ಜಪಾನಿನ ಸಾಮ್ರಾಜ್ಯದಾಹವನ್ನರಿತ ಚೀನೀ ಕಮ್ಯುನಿಸ್ಟರಾಗಲೇ ತಮ್ಮ ಸೋವಿಯಟ್ ಪ್ರದೇಶಗಳ ಜನರಲ್ಲಿ ಜಪಾನೀ ವಿರುದ್ಧ ಪ್ರಚಾರ ಮಾಡಲಾರಂಭಿಸಿದರು. ಎಲ್ಲೆಲ್ಲಿಯೂ ಜಪಾನ್ ವಿರೋಧಿ ಸಂಘಗಳು ಹುಟ್ಟಿಕೊಂಡುವು. ಅಷ್ಟಾದರೂ ಕೊಮಿಂಟಾಂಗ್ ಮಾತ್ರ ಜಪಾನಿನ ಸಹಾಯದಿಂದ ಕಮ್ಯುನಿಸ್ಟರ ವಿರುದ್ಧ ದಂಡಯಾತ್ರೆ ನಡೆಸುತ್ತಿತ್ತು. ೧೯೩೨ ರಲ್ಲಿ ಜಪಾನ್ ಷಾಂಗ್ಹೈ ರೇವಿನ ಮೇಲೆ ಆಕ್ರಮಣ ನಡೆಸಿ ಅದನ್ನು ವಶಪಡಿಸಿಕೊಂಡಿತು. ಮೊಟ್ಟಮೊದಲ ಬಾರಿ ಷಾಂಗ್ಹೈನಲ್ಲಿ ಚೀನೀಯರು ತಮ್ಮ ಶೌರ್ಯಪ್ರದರ್ಶನ ಮಾಡಿದರು. ಷಾಂಗ್ಹೈ ನಗರದಲ್ಲಿದ್ದ ಸೈನ್ಯಗಳು ಅಮೋಘವಾಗಿ ಹೋರಾಡಿ ಜಪಾನರನ್ನು ಹಿಮ್ಮೆಟ್ಟಿಸಿದುವು. ೧೯೩೩ ರಲ್ಲಿ ಜಪಾನ್, ಷಾಂಗ್ಹೈ ಕ್ವಾನ್ ಪ್ರಾಂತ್ಯವನ್ನೂ ಜೆಹಾಲ್ ಮತ್ತು ಉತ್ತರ ಚೀನವನ್ನೂ ಆಕ್ರಮಿಸಿಕೊಂಡಿತು. ಎಲ್ಲ ಕಡೆಯಲ್ಲಿಯೂ ಜಪಾನೀ ವಿರುದ್ಧ ಚಳುವಳಿ ಹರಡಿ ಹೆಚ್ಚಿತು. ಚಿಯಾಂಗ್ ಕೈಷೇಕನಿಗೆ ಮಾತ್ರ ಕಮ್ಯುನಿಸ್ಟರ ನಾಶದಲ್ಲಿಯೇ ಹೆಚ್ಚು ಆಸಕ್ತಿಯಿದ್ದುದರಿಂದ ಒಂದು ನೂತನ ಆಜ್ಞೆಯನ್ನು ಜಾರಿಗೆ ತಂದನು. ಜಪಾನೀ ವಿರುದ್ಧ ಯುದ್ಧ ಮಾಡಬೇಕೆನ್ನುವ ಜನರೆಲ್ಲರಿಗೂ ಪ್ರಾಣದಂಡನೆಯ ಶಿಕ್ಷೆ ವಿಧಿಸಲ್ಪಟ್ಟಿತು. ಜಪಾನರಿಗೆ ಸಾಕಷ್ಟು ಅನುಕೂಲ ಮಾಡಿಕೊಟ್ಟನು.

ಜಪಾನ್ ಆಕ್ರಮಣ ನಡೆಸಿದಾಗ ಮಂಚೂರಿಯನರು ಚಿಯಾಂಗನ ಸಹಾಯ ಬಯಸಿದರು. ಚಿಯಾಂಗ್ ಅವರೇ ಜಪಾನರಿಗೆ ಶರಣಾಗುವಂತೆ ಬೋಧಿಸಿದನು. ಮಂಚೂರಿಯದ ನಾಯಕನಾದ ಚಾಂಗ್-ಸೂ-ಲಿಯಾಂಗ್ ಜಪಾನನ್ನೆದುರಿಸಬೇಕೆಂದಿದ್ದ ಆಶೆ ಅಳಿಯಿತು. ಚಿಯಾಂಗನ ಒತ್ತಾಯದಿಂದ ಅವನು ತೆಪ್ಪಗಾದನು. ಲಕ್ಷಾಂತರ ಮಂದಿ ಮಂಚೂರಿಯನರು ಜಪಾನಿಗೆ ಶರಣಾಗಲು ಒಪ್ಪದೆ ಯುದ್ಧ ನಡೆಸಿದ್ದಾರೆ; ಇಂದಿಗೂ ಹೋರಾಡುತ್ತಿದ್ದಾರೆ.

ಇದಾದ ಮೇಲೆ ಜಪಾನ್ ಉತ್ತರ ಚೀನದ ಚಹಾರ್, ಹೊಪೇ,

ಷಾಂಟುಂಗ್ ಮತ್ತು ಷಾನ್ಸಿ ಪ್ರಾಂತ್ಯಗಳನ್ನು ಆಕ್ರಮಿಸಿತು. ಚಿಯಾಂಗ್ ಮತ್ತು ಅವನ ನ್ಯಾನ್‌ಕಿಂಗ್ ಸರ್ಕಾರ ಜಪಾನನ್ನು ತೃಪ್ತಿಗೊಳಿಸುವ ಅಪಘಾತಕಾರಕ ನೀತಿಯನ್ನು ಅನುಸರಿಸುತ್ತಾ ಬಂದಿತು. ನ್ಯಾನ್‌ಕಿಂಗ್ ಸರ್ಕಾರವು ಗುಟ್ಟಾಗಿ ಜಪಾನಿನೊಂದಿಗೆ ಟಾಂಗ್ಕು ಕರಾರು ಮಾಡಿಕೊಂಡಿತು. ಇದರಂತೆ ಚೀನೀ ಸೈನ್ಯಗಳು ಪೀಕಿಂಗ್ ನಗರದ ಉತ್ತರಕ್ಕೆ ೧೦ ಮೈಲಿಗಳ ಪ್ರದೇಶದವರೆಗೂ ಹಿಂದಕ್ಕೆ ಕರೆಸಲ್ಪಟ್ಟುವು. ೧೯೩೫ರಲ್ಲಿ ಚಿಯಾಂಗನೇ ಉತ್ತರ ಚೀನಕ್ಕೆ ಬಂದು ಅಲ್ಲಿನ ಸರ್ಕಾರಕ್ಕೆಲ್ಲ ಜಪಾನೀ ಅಧಿಕಾರಿಗಳನ್ನು ನಿಯಮಿಸಿ ಹಿಂತಿರುಗಿದನು.

ಚೀನದ ಗೌರವಕ್ಕೆ ಕುಂದು ತರುವಂಥಹ ಕೆಲವು ಕರಾರುಗಳನ್ನೂ ಚಿಯಾಂಗ್ ಜಪಾನದೊಂದಿಗೆ ಮಾಡಿಕೊಂಡನು. ೧೯೩೫ರಲ್ಲಿ ಹೋ-ಉಮೆಟ್ಸು ಮತ್ತು ಚಿನ್-ಡಾಯರ್‌ಹಾರ ಒಪ್ಪಂದಗಳಾದುವು. ಇವುಗಳಂತೆ ಚೀನೀ ಸೈನ್ಯಗಳು ಚಹಾರ್ ಮತ್ತು ಹೋಪೆ ಪ್ರಾಂತ್ಯಗಳಿಂದಲೂ ಹಿಂದಕ್ಕೆ ಕರೆಸಲ್ಪಟ್ಟುವು. ಪೀಕಿಂಗ್ ಮತ್ತು ಟಿಯೆಂಟ್ಸಿನ್ ನಗರಗಳಲ್ಲಿ ಜಪಾನೀ ಸೈನ್ಯಗಳು ಚೀನೀಯರನ್ನು ನರಹಿಡಿದು ಚಿತ್ರಹಿಂಸೆಗೆ ಗುರಿಮಾಡಿದರೂ ಚಿಯಾಂಗ್ ಸುಮ್ಮನಿದ್ದನು. ಷಾನ್ಸಿ ಪ್ರಾಂತ್ಯದಲ್ಲಿ ಜಪಾನರು ತಮ್ಮ ಕೈಗೊಂಬೆ ಸರ್ಕಾರ ಸ್ಥಾಪಿಸಲು ಯತ್ನಿಸಿ ವಿಫಲರಾದರು. ಆದರೆ ಪೂರ್ವ ಹೋಪೆಯಲ್ಲಿ ಅಂತಹ ಸರ್ಕಾರ ರಚಿಸಲು ಅವರಿಗೆ ಸಾಧ್ಯವಾಯಿತು. ಇದರಿಂದ ಉತ್ತರ ಚೀನದಲ್ಲಿನ ವ್ಯಾಪಾರ, ತೆರಿಗೆ ಮುಂತಾದುವೆಲ್ಲವೂ ಜಪಾನರ ವಶವಾದುವು. ಕಳ್ಳತನದಿಂದ ಸಾಮಾನು ಸಾಗಿಸುವುದು ನಿತ್ಯದ ವಿಷಯವಾಯಿತು. ಜಪಾನೀಯರು ಹಣವಂತರಾದಂತೆ ಚೀನರು ಬಡವರಾದರು. ಅವರು ಪಡುತ್ತಿದ್ದ ಪಾಡು ನಾಯಿಗಿಂತಲೂ ಕಡೆಯಾಯಿತು.

ಇಷ್ಟೆಲ್ಲ ನಡೆದರೂ ಕೊಮಿಂಟಾಂಗ್ ನಾಯಕರು ಎಚ್ಚರಗೊಳ್ಳಲಿಲ್ಲ. ಜಪಾನಿಗೆ ಚೀನವನ್ನು ಧಾರೆ ಎರೆದರೂ ಸರಿ; ಕಮ್ಯುನಿಸ್ಟರನ್ನು ಮಾತ್ರ ಇರಗೊಡಬಾರದೆನ್ನುವ ಚಿಯಾಂಗನಿಗೆ ಜಪಾನೀ ವಿರೋಧಿಗಳನ್ನು ಕಂಡರೇ ಆಗುತ್ತಿರಲಿಲ್ಲ. ಜಪಾನೀಯರ ವಿರುದ್ಧ ಲೇಖನಗಳನ್ನು ಪ್ರಕಟಿಸಿದ ಪತ್ರಿಕೆಗಳು ನಿಸಿಲ್ಲಿಸಲ್ಪಟ್ಟುವು. ಚಹಾರ್‌ನಲ್ಲಿ ಜಪಾನೀಯರು ಆಕ್ರಮಿಸಿದ ಪ್ರದೇಶವನ್ನು ಬಿಡಿಸಿದ ಸೇನಾನಿ ಫೆಂಗನ ಸೈನ್ಯವನ್ನು ಕರೆಸಿಕೊಂಡು ಅದನ್ನು ರದ್ದು

ಮಾಡಿದನು. ಉತ್ತರದಲ್ಲಿನ ಸೈನ್ಯಗಳು ಜಪಾನರಿಗೆ ಶರಣಾಗಲು ಒಪ್ಪದಿದ್ದುದರಿಂದ, ಅವುಗಳನ್ನು ದಕ್ಷಿಣ ಚೀನಕ್ಕೆ ಕಳುಹಿಸಿ ಚಿಯಾಂಗ್ ಜಪಾನರಿಗೆ ಸಹಾಯ ಮಾಡಿಕೊಟ್ಟನು. ಆದರೆ, ಜಪಾನೀ ವಿರೋಧ ಚಳುವಳಿ ಮಾತ್ರ ದಿನೇ ದಿನೇ ಪ್ರಬಲವಾಗುತ್ತಿತ್ತು. ಚಿಯಾಂಗನ ಆಟ ಬಹಳ ಕಾಲ ಸಾಗಲಿಲ್ಲ. ಜನರ ಒತ್ತಾಯದ ಬಲದಿಂದ ಚಿಯಾಂಗನೂ ಜಪಾನರ ವಿರೋಧಿಯಾಗಿ ಯುದ್ಧ ಹೂಡಬೇಕಾಯಿತು.

ಆಕ್ರಮಣಕಾರರಾದ ಜಪಾನರನ್ನು ಓಡಿಸಲು ನ್ಯಾನ್‌ಕಿಂಗ್ ಸರ್ಕಾರದೊಂದಿಗೆ ಸಹಕರಿಸಲು ಕಮ್ಯುನಿಸ್ಟರು ಸಿದ್ಧರಾಗಿದ್ದರು. ಆದರೆ ಸರ್ಕಾರಕ್ಕೆ ಅದು ಬೇಕಿರಲಿಲ್ಲ. ಬಂಡವಾಲಿಗರ ಪ್ರೇರೇಪಣೆಯಿಂದ, ಸಾಮ್ರಾಜ್ಯಶಾಹಿಗಳ ಉತ್ತೇಜನದಿಂದ ಕಮ್ಯುನಿಸ್ಟರ ವಿರುದ್ಧ ಧಾಳಿಯನ್ನು ಹೆಚ್ಚು ಮಾಡಿತು. ೧೯೩೨ ರಲ್ಲಿ ಷಾಂಗ್ಹೈ ನಗರ ಆಕ್ರಮಣವಾದಾಗಲೂ ಮತ್ತೊಂದು ಬಾರಿ ಕಮ್ಯುನಿಸ್ಟರು ಚಿಯಾಂಗನಿಗೆ ತಮ್ಮ ಸಹಾಯ ನೀಡಿದರು. ಈ ಬಾರಿಯೂ ಈತ ಜಪಾನಿಗೆ ಬಗ್ಗಿ ಸಹಕಾರ ತಿರಸ್ಕರಿಸಿದನು. ಏಪ್ರಿಲ್ ೧೫ ರಂದು ಚೀನೀ ಸೋವಿಯಟ್ ಸರ್ಕಾರವು ಜಪಾನಿನ ಮೇಲೆ ಯುದ್ಧ ಸಾರಿತು. ಜನರಲ್ ಫೆಂಗ್-ಚಿಮಿಂಗನ ನಾಯಕತ್ವದಲ್ಲಿ ಕೆಂಪು ಸೇನೆಯು ಜಪಾನರನ್ನೆದುರಿಸುವುದಕ್ಕಾಗಿ ಉತ್ತರ ಚೀನಕ್ಕೆ ಕಳುಹಿಸಲ್ಪಟ್ಟಿತು. ಆದರೆ ಜಪಾನರು ಅದನ್ನೆದುರಿಸುವಷ್ಟರಲ್ಲಿಯೇ ಚಿಯಾಂಗನ ಸೈನ್ಯಗಳೇ ಬಂದು ಅವುಗಳನ್ನೆದುರಿಸಿದುವು. ಜನರಲ್ ಫೆಂಗನನ್ನು ಸೆರೆಹಿಡಿದು ಚಿಯಾಂಗ್ ಗಲ್ಲಿಗೇರಿಸಿದನು.

೧೯೩೩ ರಲ್ಲಿ ಮತ್ತೆ ಚೀನದ ಕಮ್ಯುನಿಸ್ಟರು ಚಿಯಾಂಗನೊಂದಿಗೆ ಒಪ್ಪಂದಕ್ಕೆ ಬರಲು ಸಿದ್ಧರಾಗಿದ್ದರು. ತಮಗೂ ಚೀನದ ಎಲ್ಲ ಜನರಿಗೂ ಪ್ರಜಾಸತ್ತಾತ್ಮಕ ಹಕ್ಕುಗಳನ್ನು ಕೊಟ್ಟು, ಜನತೆಯನ್ನು ಜಪಾನಿನ ವಿರುದ್ಧ ಯುದ್ಧಕ್ಕೆ ಸಿದ್ಧಗೊಳಿಸುವುದಾದರೆ ತಾವು ಚಿಯಾಂಗನೊಂದಿಗೆ ಒಪ್ಪಂದಕ್ಕೆ ಬರಲು ಸಿದ್ಧರಾಗಿದ್ದೇವೆ ಎಂದು ಚೀನದ ಕಮ್ಯುನಿಸ್ಟರು ಸಾರಿದರು. ಇದು ಚೀನದ ಜನರಲ್ಲಿ ಬಹಳ ಪ್ರಭಾವ ಬೀರಿತು. ಎಲ್ಲೆಲ್ಲಿಯೂ ಐಕ್ಯತೆಯಾಗಬೇಕೆಂಬ ಅಭಿಪ್ರಾಯ ಹರಡಿತು. ಚಿಯಾಂಗನ ೧೯ ನೆಯ ಸೈನ್ಯ ಕೂಡ ಇದನ್ನೊಪ್ಪಿ ಬಹಳ ಕ್ರೂರವಾದ ಶಿಕ್ಷೆಗೆ ಗುರಿಯಾಯಿತು. ಎಷ್ಟೇ ಪ್ರತಿ

ಬಂಧಕವಿದ್ದರೂ ಜಪಾನೀ ವಿರೋಧ ಚಳುವಳಿ ದಿನೇ ದಿನೇ ಪ್ರಬಲವಾಗುತ್ತ ಬಂತು. ೧೯೩೪ ರಲ್ಲಿ ದೇಶಾದ್ಯಂತ ವಿದ್ಯಾರ್ಥಿಗಳ ಪ್ರದರ್ಶನಗಳೂ, ಜಪಾನೀ ವಿರೋಧ ಸಭೆಗಳೂ ಜರುಗಿದುವು "ಜಪಾನೀ ವಿರುದ್ಧ ಯುದ್ಧದಲ್ಲಿ ಚೀನೀ ಜನರ ಮುಖ್ಯ ಕರ್ತವ್ಯ ಮತ್ತು ಯೋಜನೆ" ಎನ್ನುವ ಪುಸ್ತಕ ಪ್ರಕಟವಾಯಿತು. ಕಮ್ಯೂನಿಸ್ಟರೊಂದಿಗೆ ಒಪ್ಪಂದಕ್ಕೆ ಬಂದು ಜಪಾನೀಯರ ವಿರುದ್ಧ ಐಕ್ಯತೆಯನ್ನು ಸ್ಥಾಪಿಸಬೇಕೆಂದೂ, ಜನತೆಯನ್ನು ಸಂಗ್ರಾಮಕ್ಕೆ ಸಿದ್ಧಗೊಳಿಸಿ ಶಸ್ತ್ರಾಸ್ತ್ರ ಸಜ್ಜಿತರನ್ನಾಗಿಸಬೇಕೆಂದೂ ಅದರಲ್ಲಿ ಚಿಯಾಂಗ್ ಮತ್ತು ಕೊಮಿಂಟಾಂಗ್ ಸರ್ಕಾರಕ್ಕೆ ಒತ್ತಾಯದ ಕೇಳಿಕೆ ಇತ್ತು. ಇದಕ್ಕೆ ಡಾ. ಸನ್-ಯತ್-ಸೇನನ ಪತ್ನಿ ಮತ್ತಿತರ ೩೦೦೦ ಮಂದಿ ಪ್ರಮುಖ ಚೀನೀಯರು ಸಹಿ ಹಾಕಿದ್ದರು. ಆದರೂ ಚಿಯಾಂಗ್ ಅದನ್ನು ಕಿವಿಗೇ ಹಾಕಿಕೊಳ್ಳಲಿಲ್ಲ. ಅಷ್ಟೇ ಅಲ್ಲ. ಅದಕ್ಕೆ ಸಹಿ ಹಾಕಿದ್ದ ಕೆಲವು ಮಂದಿಯನ್ನು ಕೊಲ್ಲಿಸಿದನು.

೧೯೩೫ ರಲ್ಲಿ ಕಮ್ಯೂನಿಸ್ಟರು ದಕ್ಷಿಣ ಚೀನವನ್ನು ಬಿಟ್ಟು ಉತ್ತರಕ್ಕೆ ಬಂದು ಸೇರಿದ ಮೇಲೆ ಒಂದು ಪ್ರಕಟಣೆ ಹೊರಡಿಸಿದರು. ಆ ವೇಳೆಗೆ ಜಪಾನ್ ಉತ್ತರ ಚೀನದಲ್ಲಿ ಭದ್ರವಾಗಿ ನೆಲೆಯೂರಿ ಮುನ್ನಡೆಯಲು ಆರಂಭಿಸಿತ್ತು. ಆಗಸ್ಟ್ ೧ ರಂದು ಕಮ್ಯೂನಿಸ್ಟರು ಚೀನದ ಜನತೆಗೆ ಒಂದು ಮನವಿ ಮಾಡಿಕೊಂಡರು—"ಚೀನದ ಸೋವಿಯಟ್ ಸರ್ಕಾರವೂ, ಕಮ್ಯೂನಿಸ್ಟ್ ಪಾರ್ಟಿಯೂ ಚೀನೀ ಜನರಲ್ಲಿ ಮನವಿ ಮಾಡುತ್ತವೆ—ಇದುವರೆಗಿನ ಅಂತಃಕಲಹವನ್ನೂ, ರಾಜಕೀಯ ಭಿನ್ನಾಭಿಪ್ರಾಯವನ್ನೂ, ಸೈನಿಕರ ಧಾಳಿಗಳನ್ನೂ ಅಂತರ್ಯುದ್ಧವನ್ನೂ ಬಿಟ್ಟು, ಶತ್ರುವಿನ ವಿರುದ್ಧ ಎಲ್ಲರೂ ಒಂದಾಗಿ ಹೋರಾಡಬೇಕೆನ್ನುವುದನ್ನು ನಾವೆಲ್ಲರೂ ಈಗಲಾದರೂ ಗಮನಿಸಬೇಕು. ಅದಕ್ಕಾಗಿ ಎಲ್ಲರೂ ಒಂದಾಗಬೇಕು." ಮನವಿಯ ಕೊನೆಯಲ್ಲಿ ಚೀನದ ಕೇಂದ್ರದಲ್ಲಿ ಪ್ರಜಾಸತ್ತಾತ್ಮಕ ಸರ್ಕಾರ ಸ್ಥಾಪಿತವಾಗಬೇಕೆಂದೂ, ಎಲ್ಲರ ಹಕ್ಕುಗಳನ್ನೂ ಒಪ್ಪಬೇಕೆಂದೂ ಜಪಾನೀ ವಿರುದ್ಧ ಸಂಗ್ರಾಮಕ್ಕಾಗಿ ಜನತೆಗೆ ಶಸ್ತ್ರಾಸ್ತ್ರಗಳನ್ನು ಒದಗಿಸಬೇಕೆಂದೂ ಕೊಮಿಂಟಾಂಗ್ ಸರ್ಕಾರವನ್ನು ಕೇಳಿಕೊಳ್ಳಲಾಗಿತ್ತು. ಚೀನದ ಎಲ್ಲ ಕಡೆಯೂ ಈ ಮನವಿಯು ಜನಪ್ರಿಯವಾಯಿತು.

ತಾವು ಬಲಯುತವಾದ ಕಡೆಯಲ್ಲಿ ಕೂಡ ಸೋವಿಯಟ್ ಪದ್ಧತಿಗಳನ್ನು ಬಿಟ್ಟುಕೊಟ್ಟು, ಕೊಮಿಂಟಾಂಗಿನೊಂದಿಗೆ ಒಂದುಗೂಡಿ ಜಪಾನಿನ ವಿರುದ್ಧ ಹೋರಾಡಲು ಕಮ್ಯುನಿಸ್ಟರು ಸಿದ್ಧರಾಗಿದ್ದುದು ಚೀನದ ಮೇಲೆ ಮಾತ್ರವೇ ಅಲ್ಲದೆ ಜಗತ್ತಿನ ಉಳಿದ ಸಾಮ್ರಾಜ್ಯಶಾಹಿಗಳ ಮೇಲೂ ತನ್ನ ಪ್ರಭಾವ ಬೀರಿತು. ಚೀನವನ್ನು ಶೋಷಿಸಲು ತಮಗೆ ಸಹಾಯಕನಾಗಿದ್ದ ಚಿಯಾಂಗ್ ಬಲಿಷ್ಠನಾದರೂ ತಮಗೇ ನಷ್ಟ, ಕಮ್ಯುನಿಸ್ಟರು ಬಲಯುತರಾದರೂ ನಷ್ಟ. ಚಿಯಾಂಗ್ ಬಲಯುತನಾದರೂ ಪರವಾಗಿಲ್ಲವೆಂದುಕೊಂಡು ಸಾಮ್ರಾಜ್ಯಶಾಹಿಗಳೆಲ್ಲರೂ ಅವನಿಗೆ ಸಹಾಯ ನೀಡಿದರು. ಅವನು ಜಪಾನೀಯರನ್ನು ವಿರೋಧಿಸಲು ಆಗಲೂ ಒಪ್ಪಲಿಲ್ಲ. ಕಮ್ಯುನಿಸ್ಟ್ ಪ್ರಾಂತ್ಯಗಳ ಮೇಲೆ ಧಾಳಿಯ ಮೇಲೆ ಧಾಳಿಯಾಗುತ್ತಿತ್ತು. ಕೊಮಿಂಟಾಂಗಿನ ಸೈನ್ಯಗಳಲ್ಲಿ ವಿಚಾರಶೀಲರಾದವರಿಗೆ ಕೂಡ ಅವನ ಆತ್ಮಘಾತಕ ನೀತಿ ಸರಿಬೀಳುತ್ತಿರಲಿಲ್ಲ. ನ್ಯಾನ್‌ಕಿಂಗ್ ಸರ್ಕಾರವು ಕಮ್ಯುನಿಸ್ಟರ ಕೇಳಿಕೆಯನ್ನು ಅವಹೇಳನ ಮಾಡಿ ತಾತ್ಸಾರದಿಂದ ಕಂಡು ಅವರ ವಿರುದ್ಧವಾಗಿ ಸೈನ್ಯಗಳನ್ನು ಕೂಡಿಸಿ ಕಳುಹಿಸಿತು. ಆ ಸೈನ್ಯಗಳು ಮಾತ್ರ ಕೆಲವೇ ದಿನಗಳಲ್ಲಿ ಶತ್ರುಗಳ ಕಡೆಗೇ ಸೇರಿಕೊಳ್ಳುತ್ತಿದ್ದರು. ಪೀಕಿಂಗಿನಲ್ಲಿ ವೀರ ವಿದ್ಯಾರ್ಥಿಗಳೂ ಕಮ್ಯುನಿಸ್ಟ್ ಕೇಳಿಕೆಯನ್ನು ಸಂಪೂರ್ಣವಾಗಿ ಒಪ್ಪಿಕೊಂಡರು. ೧೯೩೫ನೆಯ ಡಿಸೆಂಬರ್ ೯ರಂದು ನಾಡಿನ ಪ್ರಗತಿಯ ಬಾಳ ಕರವಾಳವಾದ ವಿದ್ಯಾರ್ಥಿಗಳು ೮೦೦ ಮಂದಿ ಸೇರಿ ಜಪಾನೀ ವಿರುದ್ಧ ಕಮ್ಯುನಿಸ್ಟ್–ಕೊಮಿಂಟಾಂಗ್‌ಗಳ ಐಕ್ಯಕ್ಕಾಗಿ ಸಭೆ, ಮೆರವಣಿಗೆಗಳನ್ನು ನಡೆಸಿದರು. ಇದೇ ದಿನ ಪೀಕಿಂಗಿನಲ್ಲಿ ಐಕ್ಯತೆಯ ಶಕ್ತಿಯ ಮುಂದಾಳುಗಳ ತಂಡ ಪ್ರದರ್ಶನ ನಡೆಸಿತು. ಈ ಮೆರವಣಿಗೆ ಮತ್ತು ಪ್ರದರ್ಶನಗಳ ವಿಚಾರ ಬಹಳ ದಿನಗಳಾದ ಮೇಲೆ ತಿಳಿದರೂ ಮಾ ತ್ಸೇ ತುಂಗ್ ಮುಂತಾದವರಿಗೆ ಬಹಳ ಆನಂದವಾಯಿತು. ಅವರ ಚರಿತ್ರೆಯ ಪುಸ್ತಕದಲ್ಲಿ ಡಿಸೆಂಬರನ್ನು ಹೊಸ ಯುಗದ ಹೊಸ್ತಿಲೆಂದು ಕರೆದಿದ್ದಾರೆ. ಅವರ ಅಭಿಪ್ರಾಯದಲ್ಲಿ ರಾಷ್ಟ್ರೀಯ ಐಕ್ಯದ ಆರಂಭ ಅದು. ಅಂದು ಮಧ್ಯವರ್ಗ ಕೂಡ ಐಕ್ಯತೆಯ ಹಾದಿಗೆ ತಿರುಗಲು ಆರಂಭಿಸಿತು. ಅಂದಿನಿಂದ ಚೀನ ಅಜೇಯವಾಗಿಯೇ ಉಳಿಯುವ ಮಾತು ಸ್ಥಿರವಾಯಿತು.

ಷಾಂಗ್ಹೈನಲ್ಲಿ ವಿದ್ಯಾರ್ಥಿಗಳು ಸಭೆ ಸೇರಿ ರೈಲುನಿಲ್ದಾಣಕ್ಕೆ ನುಗ್ಗಿ

ಒಂದು ರೈಲನ್ನು ತಮ್ಮ ವಶಪಡಿಸಿಕೊಂಡು ನ್ಯಾನ್‌ಕಿಂಗಿಗೆ ಹೊರಟರು. ಚಿಯಾಂಗನ ರಾಷ್ಟ್ರದ್ರೋಹ ನೀತಿಯು ಅವರಿಗೆ ಸರಿಬಿದ್ದಿರಲಿಲ್ಲ. ಆವರು ನ್ಯಾನ್‌ಕಿಂಗಿಗೆ ಬಾರದಂತೆ ನಡುವೆ ಎರಡು ಸೇತುವೆಗಳನ್ನು ಕೂಡ ಸರ್ಕಾರ ಒಡೆಸಿಹಾಕಿತು. ವೂಹಾನ್ ಪಟ್ಟಣಗಳಲ್ಲಿಯೂ ಇದೇ ರೀತಿ ವಿದ್ಯಾರ್ಥಿ ಪ್ರದರ್ಶನಗಳು ಜರುಗಿದುವು.

ಈ ಜಪಾನ್ ವಿರೋಧಿ ಐಕ್ಯತೆಯ ಚಳುವಳಿಗೆ ವಿದ್ಯಾರ್ಥಿಗಳೇ ನಾಯಕರಾದರೂ ಎಲ್ಲ ರೀತಿಯ ಜನರೂ ಆದರಲ್ಲಿ ಕೂಡಲಾರಂಭಿಸಿದರು. ೧೯೩೬ನೆಯ ಮೇ ತಿಂಗಳಿನ ವೇಳೆಗೆ ಚೀನದಲ್ಲೆಲ್ಲ " ನಾಡಿನ ಬಾಳಿನ ಸಂಘ " ಗಳು ಸ್ಥಾಪಿತವಾಗಿದ್ದುವು.

ಮೇ ೫ರಂದು ಮಾ ತ್ಸೇ ತುಂಗ್ ಮತ್ತು ಚುಟೇ ಕಮ್ಯುನಿಸ್ಟ್ ಪಾರ್ಟಿಯ ಪರವಾಗಿ ಮತ್ತೊಂದು ಮನವಿ ಹೊರಡಿಸಿದರು. ಆದರೆ ಚಿಯಾಂಗನು ಆದಕ್ಕೆ ಬದಲಾಗಿ ಅವರನ್ನು ಸದೆಬಡಿಯಲು ಮಂಚೂರಿಯಾ ದಿಂದ ಹಿಂದಿರುಗಿದ್ದ ಚಾಂಗ್-ಸೂ-ಲಿಯಾಂಗನನ್ನು ಕಳುಹಿಸಿದನು. ಚಾಂಗ್-ಸೂ-ಲಿಯಾಂಗನಿಗೆ ಮಂಚೂರಿಯದಲ್ಲಿದ್ದಾಗಲೇ ಜಪಾನನ್ನೆದುರಿಸುವ ಇಚ್ಛೆ ಇದ್ದರೂ ಚಿಯಾಂಗನ ಆಪ್ಪಣೆಯಂತೆ ಮಂಚೂರಿಯುವನ್ನು ಜಪಾನಿಗೆ ಒಪ್ಪಿಸಿದ್ದ. ಅದು ಆತನ ಎದೆಯಲ್ಲಿ ಕೊರೆಯುತ್ತಿತ್ತು. ಕೆಂಪು ಸೇನೆಗಳ ಕೂಡ ಸೆಣಸುವ ಇಚ್ಛೆಯಿಲ್ಲದಿದ್ದರೂ ತನ್ನ ಸೈನ್ಯದೊಂದಿಗೆ ಸಿಯಾನ್ ನಗರದಲ್ಲಿ ಬಂದಿಳಿದುಕೊಂಡಿದ್ದ.

ಜೂನ್ ೨೭ರಂದು ಮಂಗೋಲಿಯದ ಪಾಳೆಯಗಾರನಾದ ರಾಜ ಕುಮಾರ ಟೇಹನು ಜಪಾನರ ಬಲೆಗೆ ಬಿದ್ದು ತಾನು ಸ್ವತಂತ್ರನೆಂದು ಹೇಳಿ ಕೊಳ್ಳಲಾರಂಭಿಸಿ ಅವರ ಸಹಾಯದಿಂದ ಸುಯಾನ್ ಪ್ರಾಂತ್ಯವನ್ನು ಮುತ್ತಿ ದನು. ಈ ಘಟನೆಯು ದೇಶದಲ್ಲಿ ಎಲ್ಲೆಲ್ಲೂ ಜಾಗೃತಿಯನ್ನುಂಟುಮಾಡಿತು. ವಿದ್ಯಾರ್ಥಿಗಳೂ, ಪ್ರಗತಿಪರ ಬುದ್ಧಿಜೀವಿಗಳೂ ಚಾಂಗ್-ಸೂ-ಲಿಯಾಂಗನ ನಾಯಕತ್ವದಲ್ಲಿದ್ದ ಟುಂಗ್ಪೆ ಸೈನ್ಯದವರೂ ಕೂಡಲೇ ಜಪಾನಿನ ಮೇಲೆ ಯುದ್ಧ ಹೂಡಬೇಕೆಂದು ಚಿಯಾಂಗನನ್ನು ಒತ್ತಾಯಪಡಿಸಲಾರಂಭಿಸಿದರು.

ಜುಲೈ ೧೫ರಂದು ಸತಿ ಸನ್-ಯತ್-ಸೇನಳು " ನಾಡಿನ ಬಾಳಿನ ಸಂಘ "ದಿಂದ ಒಂದು ಹೇಳಿಕೆ ಹೊರಡಿಸಿದಳು. ಕೂಡಲೇ ಕೆಂಪುಸೇನೆ

ಯೊಂದಿಗೆ ಒಪ್ಪಂದಕ್ಕೆ ಬರಬೇಕೆಂದೂ, ಜಪಾನೀ ವಿರುದ್ಧ ಚಳುವಳಿ ನಡೆಸಲು ಎಲ್ಲರಿಗೂ ಅಧಿಕಾರವಿರಬೇಕೆಂದೂ, ಅದಕ್ಕೆ ಯಾವ ಅಡ್ಡಿಯನ್ನೂ ತರಕೂಡದೆಂದೂ ಮನವಿ ಮಾಡಿಕೊಂಡಳು. ಮಾ ತ್ಸೀ ತುಂಗನು ಹೇಳಿಕೆಗೆ ಬೆಂಬಲ ಕೊಟ್ಟು “ಸೋವಿಯಟ್‌ಗಳೂ ಮತ್ತು ಕೆಂಪುಸೇನೆಯೂ ಜನತೆಗೆ ಸೇರಿದುವು. ಅವು ಜನತೆಯ ನಿಜವಾದ ಮಂಗಳಕ್ಕಾಗಿ ಸೇವೆ ಸಲ್ಲಿಸಲು ಯಾವಾಗಲೂ ಸಿದ್ಧವಾಗಿವೆ” ಎಂದನು.

ಅಕ್ಟೋಬರ್ ೨೬ ರಂದು ಕೆಂಪುಸೇನೆ ಮತ್ತೊಂದು ಮನವಿ ಹೊರಡಿಸಿ ಕೆಂಪುಸೇನೆಯ ಜಪಾನೀ ವಿರುದ್ಧ ಹೋರಾಟದ ಸಿದ್ಧತೆಯನ್ನು ವಿಶದಪಡಿಸಿತು. ಆದರೆ ಚಿಯಾಂಗ್ ಮಾತ್ರ ಇದಕ್ಕೆ ಸಿದ್ಧನಾಗಿರಲಿಲ್ಲ. ರಾಷ್ಟ್ರೀಯ ಐಕ್ಯ ಅಸಾಧ್ಯವಾಗಿತ್ತೋ ಏನೋ ಎನ್ನಿಸುವಂತಿದ್ದಾಗ ಒಂದು ಅನಿರೀಕ್ಷಿತ ಘಟನೆ ನಡೆದು ರಾಷ್ಟ್ರೀಯ ಐಕ್ಯತೆ ಮತ್ತೆ ರೂಪುಗೊಂಡಿತು.

## ರಾಷ್ಟ್ರೀಯ ಐಕ್ಯ

ಚಿಯಾಂಗನು ಎಲ್ಲೆಲ್ಲಿಯೂ ಐಕ್ಯತೆಯ ಶಕ್ತಿಗಳು ಬಲಗೊಳ್ಳುತ್ತಿರುವುದನ್ನು ಕಂಡು ಬೆದರಿದನು. ಉತ್ತರ ಚೀನಕ್ಕೆ ತಾನು ಕಳುಹಿಸಿದ್ದ ಚಾಂಗ್-ಸೂ-ಲಿಯಾಂಗನೂ ಐಕ್ಯತೆಯನ್ನೊಪ್ಪುವುದು ತಿಳಿದ ಮೇಲಂತೂ ಅವನು ಅತಿ ಉಗ್ರನಾದನು. ಚಾಂಗ್-ಸೂ-ಲಿಯಾಂಗನ ಸೈನ್ಯಗಳೂ ಎಲ್ಲಿ ವೈರಿಯ ಕಡೆಗೇ ಸೇರಿಹೋದೀತೋ ಎಂದು ಅವನಿಗೆ ಬಹಳ ಗಾಬರಿಯಾಗಿತ್ತು. ಕೂಡಲೇ ಅಲ್ಲಿಯ ಸ್ಥಿತಿಯನ್ನು ಸರಿಪಡಿಸಿ ಯುದ್ಧವನ್ನು ತೀವ್ರಗೊಳಿಸುವುದಕ್ಕಾಗಿ ವಿಮಾನದಲ್ಲಿ ಸಿಯಾನ್‌ಗೆ ತೆರಳಿದನು.

ಚಾಂಗ್-ಸೂ-ಲಿಯಾಂಗನ ಸೈನ್ಯದ ನೆಲೆ ಸಿಯಾನ್ ನಗರವು ಉತ್ತರದಲ್ಲಿನ ಕಮ್ಯುನಿಸ್ಟ್ ಪ್ರಾಂತ್ಯಗಳಿಗೆ ಬಾಗಿಲು. ಕೆಂಪುಸೇನೆಗಳಿಗೆ ಹೊರಗಿನಿಂದ ಯಾವ ರೀತಿಯ ಸಹಾಯವೂ ಒದಗದಂತೆ ಆತನ ಸೈನ್ಯ ಅಡ್ಡಯಿಸಿದ್ದರೂ ಅವರು ಆ ತಡೆಯನ್ನು ದಾಟಿಕೊಂಡು ತಮ್ಮ ರಾಜಧಾನಿಗೆ ಹೋಗಿ ಬರುತ್ತಿದ್ದರು. ಒಂದು ದಿನ ಚಾಂಗ್‌ನ ಬಳಿಗೆ ಒಬ್ಬ ಯುವಕ ಬಂದು ಅವನಿಗೆ ಕಮ್ಯುನಿಸ್ಟರ ನೀತಿಯನ್ನೂ, ಅವರ ರಾಜ್ಯವಿಧಾನವನ್ನೂ ತಿಳಿಸಿ ವಿರೋಧ ನೀತಿ ಬಿಡುವಂತೆ ಕೇಳಿಕೊಂಡನು. ತಾನಾಗಿಯೇ ಸಿಂಹದ

ಗುಹೆಗೆ ನುಗ್ಗಿ ಸಿಂಹವನ್ನು ಕೆಣಕುವಂತಹ ಆವನ ಧೈರ್ಯ ಚಾಂಗನ ಮೇಲೆ ಬಹಳ ಪರಿಣಾಮಕಾರಿಯಾಯಿತು. ಫಲವಾಗಿ ಚಾಂಗ್ ಅವನಿಂದ ಸಾಕಷ್ಟು ಸಾಹಿತ್ಯ ತೆಗೆದುಕೊಂಡು ಪರಿಶೀಲಿಸಿ ಕೊನೆಗೆ ಕಮ್ಯೂನಿಸ್ಟರು ಅನುಸರಿಸುತ್ತಿರುವ ನೀತಿಯೇ ಸರಿಯೆಂದು ಮನದಟ್ಟಾದ ಮೇಲೆ ತನ್ನ ಸೈನ್ಯವನ್ನು ಕೆಂಪುಸೇನೆಯೊಂದಿಗೆ ಕೂಡಿಸಿಕೊಂಡನು. ಇದು ಚಿಯಾಂಗನಿಗೆ ತಿಳಿಯದು. ಅಲ್ಲಲ್ಲಿ ಪಿಸುಮಾತು ಕೇಳಿದ್ದನೇ ಹೊರತು ತನ್ನ ಸೈನ್ಯಕ್ಕೆ ಸೈನ್ಯವೇ ವಿರೋಧ ಪಕ್ಷ ಸೇರಿದೆಯೆಂಬುದು ತಿಳಿದಿರಲಿಲ್ಲ.

ಚಾಂಗ್-ಸೂ-ಲಿಯಾಂಗ್ ಮತ್ತು ಯಾಂಗ್-ಹೂ-ಚೆನ್ ಇಬ್ಬರೂ ಚಿಯಾಂಗನನ್ನು ಬಹಳವಾಗಿ ಬೇಡಿದರು. ಆದರೆ ಚಿಯಾಂಗ್ ಹೇಳಿದುದು ಒಂದೇ ಮಾತು. "ಜಪಾನಿನ ಮಾತು ಹಾಗಿರಲಿ. ಮೊದಲು ಈ ಕಮ್ಯೂನಿಸ್ಟರನ್ನು ಮುಗಿಸಿ, ಆ ಮೇಲೆ ಉಳಿದುದು." ೧೦ ವರ್ಷದ ಹಿಂದೆ ಹಿಡಿದ ಹಟವನ್ನು ಇನ್ನೂ ಬಿಡಲಿಲ್ಲ ಚಿಯಾಂಗನು ಜಗ್ಗದಿರಲು ಅವನನ್ನು ಸೆರೆ ಹಿಡಿದರು. ಇದೇ ಸಿಯಾನ್ ಘಟನೆ. ಚಿಯಾಂಗನ ಮೇಲೆ ತಮ್ಮೆಲ್ಲ ಸೈನಿಕರನ್ನೂ ಕಾವಲು ಹಾಕಿದರು. ತಮ್ಮ ಷರತ್ತುಗಳಿಗೆ ಒಪ್ಪಿ ಕಮ್ಯುನಿಸ್ಟರೊಡನೆ ಒಪ್ಪಂದಕ್ಕೆ ಬಾರದಿದ್ದರೆ ಕೊಲ್ಲುವುದಾಗಿ ಹೆದರಿಸಿದರು. ಆ ಸಮಯದಲ್ಲಿ ಚೀನದ ಕಮ್ಯುನಿಸ್ಟ್-ನಾಯಕರಲ್ಲಿ ಮೂರನೆಯವನಾದ ಚೌ ಎನ್ ಲೈ ಸಿಯಾನಿನಲ್ಲಿಯೇ ಇದ್ದ. ಅವನೂ ಮತ್ತು ಪಾರ್ಟಿಯ ಕಾರ್ಯದರ್ಶಿ ಪ್ರೋಕು ಕೂಡಲೇ ಚಾಂಗ್ ಮತ್ತು ಯಾಂಗರೊಂದಿಗೆ ಮಾತನಾಡಿ ಚಿಯಾಂಗನನ್ನು ಕೊಂದರೆ ಚೀನಕ್ಕೆ ದುರ್ಗತಿಯೊದಗುವುದೆಂಬುದನ್ನು ವಿವರಿಸಿ ಹೇಳಿದರು. ಚು ಟೇ ಕೂಡ ಚಾಂಗನಿಗೆ ತಿಳಿಯಹೇಳಿದ. ಆ ವೇಳೆಗೆ ಸನ-ಯಾತ್-ಸೇನನ ಪತ್ನಿಯೂ ಅಲ್ಲಿಗೆ ಬಂದಳು. ಚೌ-ಎನ್-ಲೈ ಚಿಯಾಂಗರ ಭೇಟಿಯಾಯಿತು. ಚಿಯಾಂಗನ ಮುಂದೆ ತಮ್ಮ ನೀತಿಯನ್ನು ವಿವರಿಸಿದ ಮೇಲೆ ಅವನಿಂದ ಜಪಾನೀ ವಿರುದ್ಧ ಸಂಗ್ರಾಮ ನಡೆಸುವ ಪ್ರಮಾಣ ತೆಗೆದುಕೊಂಡು, ಅವನನ್ನು ಬಿಡುಗಡೆ ಮಾಡಿ ಹಿಂದಕ್ಕೆ ಕಳುಹಿಸಿದರು. ಇದು ತೀವ್ರಗಾಮಿಗಳಾದ ಕೆಲವರಿಗೆ ಸರಿದೋರಲಿಲ್ಲ. ಅವನಿಂದ ಪತ್ರ ಬರೆಸಿಕೊಂಡು, ಬಿಡುಗಡೆ ಮಾಡಬೇಕೆಂದು ಅಭಿಪ್ರಾಯ ಪಟ್ಟರು. ಆದರೆ ಬರಿಯ ಪ್ರಮಾಣದ ಮಾತಿಗೇ ಕಮ್ಯುನಿಸ್ಟರು ತೃಪ್ತರಾದುದು ಕಂಡು

ಸಿಟ್ಟುಗೊಂಡು ಚೌ ಎನ್ ಲೈ ಮತ್ತು ಪ್ರೋಕು ಇಬ್ಬರನ್ನು ಕೊಲೆ ಮಾಡಬೇಕೆಂದಿದ್ದರು. ಆದರೆ ಚೀನದ ಭಾಗ್ಯದಿಂದ ಅದು ನಡೆಯಲಿಲ್ಲ.

ಚಿಯಾಂಗನ ಮೇಲೆ ಈ ಘಟನೆಯ ಪರಿಣಾಮ ಬಹಳ ತೀವ್ರವಾಗಿತ್ತು. ಕಮ್ಯುನಿಸ್ಟರಲ್ಲಿ ಅವನಿಗೆ ಇದುವರೆಗೂ ನಂಬುಗೆಯಿರಲಿಲ್ಲ. ಆದರೆ ಈಗ ತನ್ನನ್ನೇ ನಾಯಕನನ್ನಾಗಿ ಒಪ್ಪಿಕೊಂಡು, ತನ್ನ ಬರಿಯ ಮಾತಿಗೇ ಬೆಲೆ ಕೊಟ್ಟು ಜೀವಸಹಿತ ಗೌರವದಿಂದ ಹಿಂದಕ್ಕೆ ಕಳುಹಿಸಿದುದರ ಫಲವಾಗಿ ಅವರ ನೈಜತೆಯಲ್ಲಿ ನಂಬುಗೆ ಬಂದಿತು. ಇದಾದ ಮೇಲೆ ನಾಲ್ಕಾರು ತಿಂಗಳು ಚಿಯಾಂಗನಿಗೂ ಕಮ್ಯುನಿಸ್ಟರಿಗೂ ಒಪ್ಪಂದದ ವಿಚಾರ ಮಾತುಕತೆಗಳು ನಡೆದು ಕೊನೆಗೆ ಒಪ್ಪಂದವೂ ಆಯಿತು. ಚಿಯಾಂಗನು ಚೀನದ ಸಂಗ್ರಾಮ ಕಾಲದ ನಾಯಕನಾಗಿ ಅಂಗೀಕೃತನಾದನು.

ಈ ಒಪ್ಪಂದದಿಂದ ಷಾನ್ಸಿ-ಕಾನ್ಸು-ನಿಂಗ್ಸಿಯ ಸೋವಿಯಟ್ ಪ್ರದೇಶವನ್ನು ಇನ್ನು ಮೇಲೆ 'ವಿಶೇಷ ಪ್ರದೇಶ'ವನ್ನಾಗಿ ಪರಿಗಣಿಸಬೇಕೆಂದೂ ಅಲ್ಲಿನ ಆಡಳಿತವೆಲ್ಲ ಕಮ್ಯುನಿಸ್ಟರ ಕೈಯಲ್ಲೇ ಇರಬೇಕು, ಜಪಾನಿನ ವಿರುದ್ಧ ಯುದ್ಧವನ್ನು ಯಶಸ್ವಿಯಾಗಿ ನಡೆಸಲು ಕೇಂದ್ರ ಯುದ್ಧ ಸಮಿತಿ ಏರ್ಪಟ್ಟು ಅದರಲ್ಲಿ ಕಮ್ಯುನಿಸ್ಟ್ ಪ್ರತಿನಿಧಿಗಳೂ ಇರಬೇಕು. ಕೊಮಿಂಟಾಂಗಿಗೆ ಚುನಾವಣೆಗಳಾಗಿ ಅದು ಪ್ರಜಾಸತ್ತಾತ್ಮಕ ಸಂಸ್ಥೆಯಾಗಬೇಕು. ಚೀನದ ಜನರ ಸ್ಥಿತಿಯನ್ನು ಉತ್ತಮಗೊಳಿಸಲು ಕೊಮಿಂಟಾಂಗ್ ಕೂಡಲೇ ಆರ್ಥಿಕ ಸುಧಾರಣೆಗಳನ್ನು ನಡೆಸಬೇಕು ಎಂದು ತೀರ್ಮಾನವಾಯಿತು. ಕೆಂಪುಸೈನ್ಯ ಇನ್ನುಮೇಲೆ ರಾಷ್ಟ್ರೀಯ ಸೈನ್ಯದ ಒಂದು ಅಂಗವಾಗಿ '೮ನೆಯ ಸೈನ್ಯ'ವಾಗಿ ಮಾರ್ಪಟ್ಟಿತು. ಈ ೮ನೆಯ ಸೈನ್ಯದ ನಾಯಕ ಚುಟೇ. ಇಷ್ಟಾದರೂ ಚೀನದ ಕಮ್ಯುನಿಸ್ಟ್ ಪಾರ್ಟಿ ಮಾತ್ರ ಇನ್ನೂ ಅಕ್ರಮ ಕೂಟವಾಗಿಯೇ ಉಳಿದಿದೆ. ಅದರ ಮೇಲಿರುವ ಪ್ರತಿಬಂಧಕ ಹೋಗಲಿಲ್ಲ.

ಚೀನೀ ಸೋವಿಯಟ್‌ಗಳು ಹಿಂದೆ ಅನುಸರಿಸುತ್ತಿದ್ದ ನೀತಿಯನ್ನು ಈ ಒಪ್ಪಂದವಾದ ಮೇಲೆ ಬಿಟ್ಟುಕೊಟ್ಟರು. ಮೊದಲು ಹೋದ ಹೋದ ಪ್ರದೇಶಗಳಲ್ಲೆಲ್ಲಾ ಅಲ್ಲಿನ ಜಮೀನುದಾರರನ್ನೆಲ್ಲ ಓಡಿಸಿ ಆ ಭೂಮಿಯನ್ನೆಲ್ಲಾ ರೈತರಲ್ಲಿ ಹಂಚಿಬಿಡುತ್ತಿದ್ದರು. ಮತ ಕೊಡುವ ಮತ್ತು ಚುನಾವಣೆಗೆ ನಿಲ್ಲುವ ಹಕ್ಕು ಕೇವಲ ರೈತರಿಗೆ, ಕಾರ್ಮಿಕರಿಗೆ ಮತ್ತು ಶೋಷಕವರ್ಗವಲ್ಲದವರಿಗೆ

ಮಾತ್ರ. ೧೬ ವರ್ಷಕ್ಕೆ ಮೇಲ್ಪಟ್ಟ ಪ್ರತಿಯೊಬ್ಬರೂ ಮತ ಕೊಡಬಹು ದಾಗಿತ್ತು. ಚಿಯಾಂಗನೊಂದಿಗೆ ಒಪ್ಪಂದವಾದೊಡನೆ ಇವರು ಭೂಮಿ ಯನ್ನು ಸೋವಿಯಟ್‌ಗಳನ್ನಾಗಿ ಮಾಡುವುದನ್ನು ಬಿಟ್ಟರು. ಹಿಂದೆ ಓಡಿ ಹೋಗಿದ್ದ ಜಮೀನುದಾರರು ಹಿಂತಿರುಗಿದಾಗ ಅವರ ಸ್ವಂತ ಉಪಯೋಗಕ್ಕೆ ಸಾಕಾಗುವಷ್ಟು ಮಾತ್ರ ಅವರಿಗೆ ಕೊಡಲಾಯಿತು. ಮತಕೊಡುವ ಮತ್ತು ಚುನಾವಣೆಗೆ ನಿಲ್ಲುವ ಹಕ್ಕು ಶೋಷಕ ವರ್ಗದವರಿಗೂ ದೊರಕಿತು. ಆದರೆ ೨೧ ವರ್ಷ ಮೇಲ್ಪಟ್ಟವರಿಗೆ ಮಾತ್ರ! ಸರ್ಕಾರದ ವಿಧಾನ ಕೂಡ ಬದಲಾವಣೆ ಯಾಯಿತು. ಪ್ರತಿಯೊಂದು ಹಳ್ಳಿಯಲ್ಲಿಯೂ ಚುನಾವಣೆ ನಡೆದು ಗ್ರಾಮ ಪಂಚಾಯಿತಿಗಳಿಂದ ಕೇಂದ್ರ ಸರ್ಕಾರಕ್ಕೆ ಪ್ರತಿನಿಧಿಗಳು ಹೋಗುತ್ತಿದ್ದರು. ಈ ಸಾರ್ವತ್ರಿಕ ಚುನಾವಣೆಗಳಲ್ಲಿ ಅನುಸರಿಸಿದ ಹೊಸ ವಿಧಾನದಂತೆ ಸರ್ಕಾರದಲ್ಲಿ ಕಮ್ಯೂನಿಸ್ಟರು, ಕೊಮಿಂಟಾಂಗಿನವರು ಮತ್ತು ಉಳಿದ ಪಕ್ಷ ದವರ ಪ್ರಮಾಣ ೩ : ೩ : ೩ ಇರಬೇಕೆಂದಾಯಿತು. ಎಲ್ಲಿಯೂ ತಮ್ಮ ವರು ಹೆಚ್ಚು ಪ್ರಮಾಣದಲ್ಲಿ ಬರದಂತೆ ಪಾರ್ಟಿಯವರು ನೋಡಿಕೊಳ್ಳುತಿದ್ದರು. ಕೆಂಪು ಬಾವುಟವನ್ನು ಕೂಡ ಬಿಟ್ಟುಕೊಟ್ಟು ಸಾಮ್ಯವಾದೀ ತತ್ವವನ್ನು, ನೀತಿಯನ್ನು ಪೂರ್ಣವಾಗಿ ಆಚರಣೆಗೆ ತರದೆ ಡಾ. ಸನ್-ಯಾತ್-ಸೇನನ ಮೂರು ಸಿದ್ಧಾಂತಗಳನ್ನೇ ಅನುಸರಿಸಿದರು. ಜನತೆಯ ಪ್ರಜಾಪ್ರಭುತ್ವ, ಜನತೆಯ ಬಾಳ್ವೆ, ಜನತೆಯ ರಾಷ್ಟ್ರೀಯತೆಗಳನ್ನು ನಿಜವಾಗಿ ಆಚರಿಸ ಲಾರಂಭಿಸಿದವರೆಂದರೆ ಚೀನದ ಕಮ್ಯೂನಿಸ್ಟರು. ಕೊಮಿಂಟಾಂಗಿನೊಂದಿಗೆ ಸಹಕಾರದಿಂದ ಕಾರ್ಯ ನಡೆಸುವುದಕ್ಕಾಗಿ ತಾವು ಅನುಸರಿಸಬೇಕಾದ ಒಂದು ಯೋಜನೆಯನ್ನು ಕೂಡ ತಯಾರಿಸಿದ್ದರು. ಅದರಂತೆ ದೂದಲಿನ ಸೋವಿ ಯಟ್ ಯೋಜನೆಗೆ ಬದಲಾಗಿ ಈ ಹತ್ತು ಅಂಶಗಳನ್ನು ಅನುಸರಿಸಿ ಕಾರ್ಯ ನಡೆಸುವ ತೀರ್ಮಾನವಾಯಿತು.

೧. ಜಪಾನನ್ನು ಸಂಪೂರ್ಣವಾಗಿ, ದೃಢವಾಗಿ ಎದುರಿಸಿ ಚೀನದಿಂದ ಜಪಾನೀ ಸಾಮ್ರಾಜ್ಯಶಾಹಿಯನ್ನು ಓಡಿಸುವುದು.

೨. ಜಪಾನ್ ಸರ್ಕಾರದೊಂದಿಗೆ ಎಲ್ಲ ರೀತಿಯ ಬಾಂಧವ್ಯವನ್ನೂ ತ್ಯಜಿಸುವುದು.

೩. ಜಪಾನಿನ ವಿರುದ್ಧ ಹೋರಾಡಲು ನಾಡಿನ ಎಲ್ಲ ಜನರನ್ನು ಹುರಿದುಂಬಿಸಿ ಸಂಘಟಿಸುವುದು.

೪. ಜಪಾನೀಯರ ವಿರುದ್ಧ ರಣರಂಗಕ್ಕೆ ಎಲ್ಲ ಜನರೂ ಸೇರುವಂತೆ ಮಾಡಲು ಜನರಿಗೆ ರಾಷ್ಟ್ರಭಕ್ತಿಯ ರಾಜಕೀಯ ಕಾರ್ಯ ನಡೆಸಲು ಸ್ವಾತಂತ್ರ್ಯ ಕೊಡುವುದು ಮತ್ತು ಸಶಸ್ತ್ರರಾಗಲು ಸಹಾಯ ನೀಡುವುದು.

೫. ಜಪಾನೀ ಸಾಮ್ರಾಜ್ಯಶಾಹಿಯ ಪಂಚಮದಳದವರನ್ನೂ, ರಾಷ್ಟ್ರ ದ್ರೋಹಿಗಳನ್ನೂ ಅಳಿಸಿ, ಎಲ್ಲಾ ಸಂಗಡಗಳ ರಾಷ್ಟ್ರೀಯ ಕೇಂದ್ರ ಸರ್ಕಾರ ಸ್ಥಾಪಿಸುವುದು.

೬. ರಾಜಕೀಯವಾಗಿಯೂ ಜಪಾನೀ ವಿರುದ್ಧ ನೀತಿಯನ್ನನುಸರಿಸಿ ಸೋವಿಯಟ್ ರಷ್ಯಾದೊಂದಿಗೂ, ಇಂಗ್ಲೆಂಡ್, ಅಮೆರಿಕ ಮತ್ತು ಫ್ರಾನ್ಸ್ ಗಳೊಂದಿಗೂ ಜಪಾನೀ ವಿರುದ್ಧ ಒಪ್ಪಂದ ಮಾಡಿಕೊಳ್ಳುವುದು.

೭. ಜಪಾನೀ ವಿರುದ್ಧ 'ಆರ್ಥಿಕ ನೀತಿಯನ್ನು ಆನುಷ್ಠಾನಕ್ಕೆ ತರುವುದು. ಹಣವಿರುವವರೆಲ್ಲರೂ ಜಪಾನೀ ವಿರುದ್ಧ ಸಂಗ್ರಾಮಕ್ಕೆ ಸಹಾಯ ನೀಡಬೇಕು. ಜಪಾನೀ ಸಾಮ್ರಾಜ್ಯಶಾಹಿಯ ಎಲ್ಲಾ ಹಣವನ್ನೂ ಸಾಮಾನನ್ನೂ ಮುಟ್ಟುಗೋಲು ಹಾಕಿಕೊಳ್ಳುವುದು.

೮. ಜನರ ಜೀವನವನ್ನು ಸುಧಾರಿಸುವುದು. ಅಕ್ರಮ ತೆರಿಗೆಗಳನ್ನೆಲ್ಲಾ ರದ್ದುಮಾಡಿ, ಎಲ್ಲಾ ತೆರಿಗೆಯನ್ನೂ, ಗುತ್ತಿಗೆಯ ಹಣವನ್ನೂ ಕಡಿಮೆ ಮಾಡುವುದು.

೯. ಜಪಾನೀ ವಿರುದ್ಧ ರಾಷ್ಟ್ರೀಯ ವಿದ್ಯಾಭ್ಯಾಸವನ್ನು ಬೆಳೆಸುವುದು.

೧೦. ಜಪಾನೀ ವಿರುದ್ಧ ಸಂಗ್ರಾಮಕ್ಕಾಗಿ ನಾಡಿನ ಎರಡು ಮುಖ್ಯ ಸಂಗಡಗಳಾದ ಕಮ್ಯುನಿಸ್ಟ್ ಪಾರ್ಟಿಯೂ ಕೊಮಿಂಟಾಂಗ್ ಪಕ್ಷವೂ ಐಕ್ಯಗೊಳ್ಳುವುದು.

ಈ ಹತ್ತು ಅಂಶಗಳನ್ನು ಚೀನದ ಕಮ್ಯುನಿಸ್ಟರು ಒಪ್ಪಂದದ ಆಧಾರವಾಗಿ ಚಿಯಾಂಗನಿಗೆ ಸೂಚಿಸಿದರು. ಇದರಲ್ಲಿ ಪ್ರತಿಯೊಂದರಲ್ಲಿಯೂ ನಾವು ಮುಖ್ಯವಾಗಿ ಕಾಣುವುದು ಚೀನದಲ್ಲಿ ಕಾಲಿಟ್ಟಿರುವ ಜಪಾನೀ ಸಾಮ್ರಾಜ್ಯಶಾಹಿಯನ್ನು ಚೀನದಿಂದ ಕಾಲು ಕೀಳುವಂತೆ ಮಾಡಿ ಸ್ವತಂತ್ರ ಚೀನ ಬೆಳಗುವಂತೆ ಮಾಡುವ ಸ್ವಾತಂತ್ರ್ಯಪ್ರಿಯತೆ. "ಈ ಹತ್ತು ಅಂಶಗಳನ್ನು ನಾವು

ಪೂರ್ಣವಾಗಿ ಅನುಸರಿಸಿ ಅನುಷ್ಠಾನಕ್ಕೆ ತಂದರೆ, ಜಪಾನೀ ಸಾಮ್ರಾಜ್ಯಶಾಹಿ ಯನ್ನು ಓಡಿಸಬಹುದು. ಇಲ್ಲದೇ ಹೋದಲ್ಲಿ ಚೀನ ಖಂಡಿತವಾಗಿಯೂ ಅಳಿಯುವುದು" ಎಂದಿದಾನೆ ಮಾತ್ಸೇ ತುಂಗ್.

ಸಂಗ್ರಾಮ ೧೯೩೭ ರ ಜುಲೈ ೮ ರಂದು ಆರಂಭವಾಯಿತು. ಜಪಾನಿಗೆ ಸಂದರ್ಭ ಅನುಕೂಲವಾಗಿ ಕಂಕಣ ಕೂಡಿ ಬಂದಿತ್ತು. ಇಂಗ್ಲೆಂಡಿನ ಛೇಂಬರ್ಲಿನ್ ಮಹಾಶಯ ಮ್ಯೂನಿಚ್‌ನಲ್ಲಿ ಹಿಟ್ಲರನಿಗೆ ತಲೆಬಾಗಿದ್ದ. ಜಪಾನ್ ಈಗಾಗಲೇ ಹಿಟ್ಲರ್ ಮತ್ತು ಮುಸೋಲಿನಿಗಳೊಂದಿಗೆ ಕೊಮಿಂ ಟರ್ನ್‌ವಿರೋಧ ಒಪ್ಪಂದ ಮಾಡಿಕೊಂಡಿತ್ತು. ಚಿಯಾಂಗ್ ಚೀನದ ಕಮ್ಯುನಿಷ್ಟರನ್ನು ನಿರ್ನಾಮಗೊಳಿಸಲಿ; ಕಾದಿ ಕಾದಿ ಬೇಸತ್ತು ಬಡವಾದ ಕೊಮಿಂಟಾಂಗನ್ನು ನಾವು ಸೋಲಿಸುವುದು ಅಷ್ಟು ಕಷ್ಟವಾಗಲಾರದೆಂದು ಜಪಾನಿನ ಹಂಚಿಕೆ. ಆದರೆ ಕಮ್ಯುನಿಸ್ಟ್—ಕೊಮಿಂಟಾಂಗ್ ಪಕ್ಷಗಳು ಒಂದುಗೂಡುವುದು ಕಂಡು ಬೆದರಿ ಆಕ್ರಮಣವನ್ನು ಆರಂಭಿಸಿತು. ಬ್ರಿಟನ್ ಮತ್ತು ಅಮೆರಿಕಗಳು ಚೀನದ ಸಹಾಯಕ್ಕೆ ಬರುವುದಿಲ್ಲವೆಂಬುದು ಜಪಾನಿಗೆ ಖಚಿತವಾಗಿತ್ತು. ಮಂಚೂರಿಯ ಆಕ್ರಮಿಸಿದಾಗ ಬ್ರಿಟನ್ ಮತ್ತು ಅಮೆರಿಕ ಗಳೇ ತನಗೆ ಸಹಾಯ ನೀಡಲಿಲ್ಲವೇ? ಚೀನದ ಮೇಲೆ ಮೊದಲು ನಡೆಸಿದ ಧಾಳಿಗಳಲ್ಲೆಲ್ಲಾ ಬ್ರಿಟನ್ನಿನ ಬೆಂಬಲ ತನಗಿರಲಿಲ್ಲವೇ? ಈಗಲೂ ಬ್ರಿಟನ್ ಮತ್ತು ಅಮೆರಿಕಗಳಿಂದ ತನಗೆ ಸಹಾಯ ದೊರೆಯುತ್ತಿರಲಿಲ್ಲವೇ? ಜಪಾನ್ ಎಣಿಸಿದಂತೆಯೇ ಬ್ರಿಟನ್ ಮತ್ತು ಅಮೆರಿಕಗಳು ಚೀನಕ್ಕೆ ಬರಿಯ ಮಾತಿನ ಸಹಾನುಭೂತಿ ತೋರಿ ಮೊದಲಿನಂತೆಯೇ ಜಪಾನಿಗೇ ಸಂಗ್ರಾಮ ಸಾಮಗ್ರಿ ಗಳನ್ನು ಒದಗಿಸುತ್ತಿದ್ದವು. ಅನುಕೂಲ ಸನ್ನಿವೇಶ ಒದಗಿದೊಡನೆಯೇ ಜಪಾನ್ ಚೀನದ ಆಕ್ರಮಣವನ್ನಾರಂಭಿಸಿ ಕೆಲವೇ ದಿನಗಳಲ್ಲಿ ಚೀನದಲ್ಲಿ ಬಹು ಭಾಗವನ್ನು ವಶಪಡಿಸಿಕೊಂಡಿತು. ಆಗಸ್ಟ್ ೧೧ ರಂದು ಷಾಂಗೈ ರೇವನ್ನು ಮುತ್ತಿದರೂ ಷಾಂಗೈ ಪತನವಾಗಲು ಮೂರು ತಿಂಗಳ ಪ್ರಚಂಡ ಕಾದಾಟವಾಗಬೇಕಾಯಿತು. ಡಿಸೆಂಬರಿನಲ್ಲಿ ನ್ಯಾನ್‌ಕಿಂಗಿನ ಪತನವಾಯಿತು. ಜಪಾನರು ತಾವು ಹೋದ ಹೋದೆಡೆಗಳಲ್ಲೆಲ್ಲಾ ನಡೆಸಿದ ಅತ್ಯಾಚಾರಗಳ ನ್ನೆಲ್ಲಾ ವರ್ಣಿಸುವುದು ಅಸಾಧ್ಯದ ಮಾತು. ನ್ಯಾನ್‌ಕಿಂಗ್ ನಗರವೊಂದ ರಲ್ಲಿಯೇ ೪೨೦೦೦ ಜನರನ್ನು ತುಂಡರಿಸಿದರು. ೧೦ರಿಂದ ೭೦ ವಯಸ್ಸಿನ

ಯಾವ ಹೆಣ್ಣೂ ಅವರ ಭೋಗಕ್ಕೆ, ಕಾಮುಕ್ಕೆ ತುತ್ತಾಗದೆ ಉಳಿಯಲಿಲ್ಲ. ಇತಿಹಾಸದಲ್ಲಿ ಹಿಂದೆಂದೂ ಕಾಣದಂತಹ, ಅತ್ಯಾಚಾರ, ಲೂಟಿ, ಕೊಲೆಗಳನ್ನು ನಡೆಸುತ್ತಾ ೧ ತಿಂಗಳ ಕಾಲ ನಗರದಲ್ಲಿ ೫೦೦೦೦ ಮಂದಿ ಸೈನಿಕರು ಸ್ವೇಚ್ಛಾಚಾರಿಗಳಾಗಿದ್ದರೆಂದರೆ ಉಳಿದುದನ್ನು ನಾವೇ ಊಹಿಸಿಕೊಳ್ಳಬಹುದು. ಜಯಿಸಿದ ಪ್ರದೇಶಗಳಲ್ಲಿ ಎಲ್ಲಾ ಕಡೆಗಳಲ್ಲಿಯೂ ಜಪಾನರು ಇದೇ ರೀತಿ ನಡೆಸಿಕೊಂಡು ಬಂದರು. ತಾಯಿಯೆದುರಿಗೆ ಮಗುವನ್ನು ಎತ್ತಿ ಚೆಂಡಿನಂತೆ ಮೇಲೆಸೆದು ಅದನ್ನು ಬಂದೂಕದ ಕತ್ತಿಯ ಮೊನೆಯಿಂದ ಹಿಡಿಯುವುದಕ್ಕಿಂತ ಕ್ರೂರತೆಯ ನಿದರ್ಶನ ಬೇಕೇ? ತಾಯಿ, ಮಗಳು ಇಬ್ಬರನ್ನೂ ಸಾಕಷ್ಟು ಅತ್ಯಾಚಾರಕ್ಕೀಡುಮಾಡಿ ನಗ್ನರಾಗಿ ನಿಲ್ಲಿಸಿ ಅವರನ್ನು ಗುರಿಯನ್ನಾಗಿಟ್ಟುಕೊಂಡು ಕತ್ತಿಯ ವರಸೆ ಅಭ್ಯಾಸ ಮಾಡುವುದಕ್ಕಿಂತ ರಾಕ್ಷಸೀ ಕೃತ್ಯ ಬೇಕೇ? ಇಂತಹುದು ಒಂದಲ್ಲ ಎರಡಲ್ಲ ಕೋಟಿ ಸಂಖ್ಯೆಗಳಲ್ಲಿ ಜಪಾನೀಯರು ನಡೆಸಿದರು—ನಡೆಸಿದ್ದಾರೆ!

ಚೀನೀ ಕಮ್ಯುನಿಸ್ಟ್ ಪಾರ್ಟಿಯು ತನ್ನ ಘೋಷಣ ಪತ್ರದಲ್ಲಿ "ಜಪಾನಿ ಸಾಮ್ರಾಜ್ಯಶಾಹಿಯ ಮುನ್ನಡೆಯನ್ನು ತಡೆಯಲು ಒಳಗೆ ಐಕ್ಯತೆಯಿದ್ದರೆ ಮಾತ್ರ ಸಾಧ್ಯ" ಎಂದು ಘೋಷಿಸಿತು. "ಚೀನೀ ಕಮ್ಯುನಿಸ್ಟ್ ಪಾರ್ಟಿಯ ಈ ಕಾರ್ಯವು ಉಳಿದೆಲ್ಲ ವಿಚಾರಗಳ ಮೇಲೂ ರಾಷ್ಟ್ರೀಯತೆಯ ವಿಜಯದ ಹಿರಿಯ ನಿದರ್ಶನ. ಜನತೆಯ ಮೂರು ಸಿದ್ಧಾಂತಗಳನ್ನು ಅನುಸರಿಸುವ ಪ್ರತಿಯೊಬ್ಬರಿಗೂ, ಅವರ ಹಿಂದಿನ ಕಾರ್ಯಗಳು, ವಿಚಾರಗಳು ಹೇಗಿದ್ದರೂ, ಈಗ ನ್ಯಾನ್‌ಕಿಂಗ್ ಸರ್ಕಾರವು ತನ್ನ ಸಹಕಾರವನ್ನು ನೀಡುತ್ತದೆ. ರಾಷ್ಟ್ರೀಯ ಉಳಿವಿಗಾಗಿ ಕೊಮಿಂಟಾಂಗಿನ ನಾಯಕತ್ವದಲ್ಲಿ ಯಾವ ಪಕ್ಷ ಬೇಕಾದರೂ ಬಂದು ಸೇರಬಹುದು" ಎಂದು ಅದಕ್ಕೆ ಉತ್ತರವಾಗಿ ಚಿಯಾಂಗನು ಹೇಳಿಕೆ ಕೊಟ್ಟನು. ಕಮ್ಯುನಿಸ್ಟ್–ಕೊಮಿಂಟಾಂಗ್ ಐಕ್ಯವನ್ನು ಸ್ವಾಗತಿಸುತ್ತಾ ಡಾ. ಸನ್-ಯತ್-ಸೇನನ ಪತ್ನಿ ಈ ರೀತಿ ಬರೆದಿದ್ದಾಳೆ. "ಅವನ ಜೀವಮಾನದಲ್ಲೆಲ್ಲಾ ಸನ್ ಚೀನದ ಉಳಿವಿಗಾಗಿ ಐಕ್ಯತೆಯಿಂದ ಹೋರಾಡುವುದನ್ನೇ ಬೋಧಿಸುತ್ತಿದ್ದನು. ಅದರಿಂದಲೇ ಆತ ಕೊಮಿಂಟಾಂಗ್ ಮತ್ತು ಕಮ್ಯುನಿಸ್ಟ್ ಪಕ್ಷಗಳು ಒಂದುಗೂಡಿಯೇ ಕೆಲಸ ಮಾಡಬೇಕೆಂದು ಹೇಳುತ್ತಿದ್ದುದು. ಡಾ. ಸನ್ ಹೇಳಿದ ಐಕ್ಯತೆ ಈ ವೇಳೆಗೆ ಇದ್ದಿದ್ದರೆ, ಚೀನ

ಸ್ವತಂತ್ರವಾಗಿರುತ್ತಿತ್ತು. ಅನುಭವದಿಂದ ಬಹಳ ಪಾಠ ಕಲಿಯಬೇಕಾಗಿದೆ, ಈಗಿನ ಸನ್ನಿವೇಶದಲ್ಲಿ ಭಿನ್ನಾಭಿಪ್ರಾಯಗಳನ್ನೆಲ್ಲ ಮರೆತು ಜಪಾನೀ ಆಕ್ರಮಣವನ್ನೆದುರಿಸಿ, ವಿಜಯ ಪತಾಕೆಯನ್ನು ಮೇಲೆತ್ತುವುದಕ್ಕಾಗಿ ನಾಡಿಗೆ ನಾಡೇ ಒಂದಾಗಬೇಕು."

ಕಮ್ಯುನಿಸ್ಟ್ ಕೋಮಿಂಟಾಂಗ್‌ಗಳ ಐಕ್ಯತೆಯು ಸೆಪ್ಟಂಬರಿನಲ್ಲಿ ಬಹಿರಂಗವಾಗಿ ಪ್ರಕಟಿತವಾಗಿ ಘೋಷಣ ಪತ್ರ ಪ್ರಚುರಿಸಲ್ಪಟ್ಟಿತು. ಸಂಗ್ರಾಮ ಆರಂಭವಾದೊಡನೆಯೇ ಚು ಟೇ ಕೆಂಪುಸೈನ್ಯದೊಂದಿಗೆ ಜಪಾನನ್ನೆದುರಿಸಿದನು. ಆಗಸ್ಟ್ ೨೨ ರಲ್ಲಿ ಕೆಂಪುಸೇನೆಗಳ ಹೆಸರನ್ನು ೮ ನೆಯ ಸೈನ್ಯವೆಂದು ಬದಲಾಯಿಸಲಾಯಿತು. ಸೆಪ್ಟಂಬರಿನಲ್ಲಿ ಷಾನ್ಸಿ ಪ್ರಾಂತ್ಯದ ಪಿಂಗ್‌ಸಿಂಗ್ ಕುವಾನ್‌ನಲ್ಲಿ ೮ ನೆಯ ಸೈನ್ಯಕ್ಕೂ ಜಪಾನೀ ಸೈನ್ಯಕ್ಕೂ ತೀವ್ರ ಕಾದಾಟವಾಗಿ ೮ ನೆಯ ಸೈನ್ಯವು ವಿಜಯಶಾಲಿಯಾಯಿತು. ಜಪಾನ್ ಚೀನವನ್ನಾಕ್ರಮಿಸಿದ ಮೇಲೆ ಮೊಟ್ಟಮೊದಲಿನ ವಿಜಯ ಈ ಸೇನೆಗೇ!

ನ್ಯಾನ್‌ಕಿಂಗ್ ಪತನವಾದ ಮೇಲೆ ಸರ್ಕಾರವು ಚುಂಗ್‌ಕಿಂಗಿಗೆ ಬದಲಾಯಿಸಲ್ಪಟ್ಟಿತು. 'ಚೀನದ ವಿಜಯಕ್ಕೆ ಮೂಲ, ದೀರ್ಘ ಕಾಲದ ಕಾದಾಟ. ಇದು ನ್ಯಾನ್‌ಕಿಂಗಿನಲ್ಲಾಗಲಿ, ಉಳಿದ ದೊಡ್ಡ ನಗರಗಳಲ್ಲಿಯೇ ಆಗಲಿ ಇಲ್ಲ. ಅದಿರುವುದು ಚೀನದ ಹಳ್ಳಿಗಳಲ್ಲಿ ಮತ್ತು ಜನತೆಯ ಅಚಲ ಧೈರ್ಯದಲ್ಲಿ' ಎಂದು ಚಿಯಾಂಗ್ ತನ್ನ ಭಾಷಣದಲ್ಲಿ ಘೋಷಿಸಿದ.

ಅದೇ ವೇಳೆಯಲ್ಲಿಯೇ ೮ನೆ ಸೈನ್ಯವು ಟಾಯೆಸ್ಕ್ವಾಂಗ್ ಬಳಿಯಲ್ಲಿ ಪೈಚುಂಗ್‌ಸಿ ಮತ್ತು ಲಿತ್ಸುಂಗ್ ಯೆನ್ ಎಂಬ ಸೇನಾನಿಗಳ ನಾಯಕತ್ವದಲ್ಲಿ ೧೬ ದಿನಗಳ ಕಾಲ ಜಪಾನ್ ಸೈನ್ಯಗಳನ್ನೆದುರಿಸಿ ಜಯಶಾಲಿಯಾಯಿತು.

'೩೮ರ ಆರಂಭದಲ್ಲಿ ಕ್ಯಾಂಟನ್ ನಗರದ ಪತನವಾಯಿತು. ಇಲ್ಲಿ ಕೊಲೆಯಾದವರ ಸಂಖ್ಯೆ ಏನಿಲ್ಲೆಂದರೂ ೧೦೦೦೦ಕ್ಕೆ ಮೇಲ್ಪಟ್ಟು!

ವರ್ಷದ ಅಂತ್ಯದ ವೇಳೆಗಾಗಲೇ ಜಪಾನ್ ಚೀನದಲ್ಲಿ ತನಗೆ ಮುಖ್ಯವಾಗಿ ಬೇಕಾದುದನ್ನೆಲ್ಲ ವಶಪಡಿಸಿಕೊಂಡಿತ್ತು. ಚೀನದ ದೊಡ್ಡ ದೊಡ್ಡ ಪಟ್ಟಣಗಳೂ ಜಲಮಾರ್ಗಗಳೂ ವೈರಿಗಾಗಿತ್ತು. ಲುಂಗ್ಹೈ ರೈಲ್ವೆಮಾರ್ಗವನ್ನುಳಿದು ಮತ್ತೆಲ್ಲಾ ರೈಲುಮಾರ್ಗಗಳೂ ಜಪಾನಿನ ಆಡಳಿತಕ್ಕೆ ಸೇರಿದುವು. ಚೀನದ ಕೈಗಾರಿಕೆಯ ೮೦% ಷಾಂಘೈ, ಕ್ಯಾಂಟನ್, ನ್ಯಾನ್ಕಿಂಗ್ ಮುಂತಾದ

ದೊಡ್ಡ ಪಟ್ಟಣಗಳಲ್ಲಿತ್ತು. ಜಪಾನ್ ಆ ಪಟ್ಟಣಗಳನ್ನೆಲ್ಲ ಸುಲಭವಾಗಿ ಶೀಘ್ರದಲ್ಲಿಯೇ ಆಕ್ರಮಿಸಿಕೊಂಡು ನ್ಯಾನ್‌ಕಿಂಗಿನಲ್ಲಿ ಕೈಗೊಂಬೆ ಸರ್ಕಾರ ಸ್ಥಾಪಿಸಿತು. ಅದರ ಮುಖ್ಯ ಮಂತ್ರಿ ವಾಂಗ್ ಚಿಂಗ್ ವೈ! ಈತ ಪ್ರಚಂಡ ಕಮ್ಯುನಿಸ್ಟ್ ವಿರೋಧಿಯಾಗಿದ್ದವನು; ಕೊಮಿಂಟಾಂಗ್ ಪಕ್ಷದ ಉಪಾಧ್ಯಕ್ಷನಾಗಿದ್ದವನು; ಚಿಯಾಂಗನ ಬಲಗೈ ಎನ್ನಿಸಿಕೊಂಡವನು. ಅವನೇ ಈಗ ಜಪಾನೀಯರ ಜತೆಗೂಡಿಕೊಂಡ. ಚಿಯಾಂಗನಿಂದ ಅವನ ವಿರುದ್ಧ ಒಂದು ಮಾತಾದರೂ ಬರಲಿಲ್ಲ.

ವರ್ಷಾರಂಭದಲ್ಲಿ ಚಿಯಾಂಗನು ಕಿಯಾಂಗ್ಸಿ ಮತ್ತು ಫ್ಯೂಕ್ಯೆನ್ ಪ್ರಾಂತ್ಯಗಳ ಕಮ್ಯುನಿಸ್ಟರು ಸೈನ್ಯ ಕೂಡಿಸಿ ಜಪಾನಿನ ವಿರುದ್ಧ ಹೋರಾಡಲು ಅನುಮತಿ ಕೊಟ್ಟನು. ಕ್ಯಾಂಟನ್ ಕಮ್ಯೂನಿನ ಪತನಾ ನಂತರ ಅದರ ನಾಯಕನಾಗಿದ್ದ ಯೇ ಟಿಂಗ್ ಇದ್ದಕ್ಕಿದ್ದಂತೆ ಮರೆಯಾಗಿದ್ದವನು ಮತ್ತೆ ಹೊರಬಂದು ಹಾನ್ ಯಿಂಗ್‌ನ ಜತೆಗೂಡಿ ಸೈನ್ಯ ಸೇರಿಸಲಾರಂಭಿಸಿದನು. ಮೊದಲು ಸೋವಿಯಟ್ ಪ್ರದೇಶಗಳಾಗಿದ್ದ ಆ ಪ್ರಾಂತ್ಯಗಳಲ್ಲಿ ಕೂಡಲೇ ಈ ಸುದ್ದಿ ಹರಡಿ ಜನ ತಾವಾಗಿಯೇ ಬಂದು ಸೈನ್ಯಕ್ಕೆ ಸೇರಲಾರಂಭಿಸಿದರು.

ಜಪಾನೀಯರು ಮುನ್ನಡೆದಂತೆಲ್ಲಾ ಕೊಮಿಂಟಾಂಗ್ ಸೈನ್ಯಗಳು ಹಿಮ್ಮೆಟ್ಟುತ್ತಿದ್ದುವು. ಪರಿಣಾಮ; ಕ್ಯಾಂಕೋ ಪತನ. ಕಮ್ಯುನಿಸ್ಟರು ಕೂಡಿಸಿದ ಸೈನ್ಯಕ್ಕೆ 'ನೂತನ ನಾಲ್ಕನೆಯ ದಳ' [New Fourth Army] ವೆಂದು ಹೆಸರಾಯಿತು. ಆಗಿನ್ನೂ ಸೆರೆಯಿಂದ ಬಿಡುಗಡೆಯಾದವರೂ, ಸುಧಾರಣಾ ಶಾಲೆಯ ಜನರೂ, ರೈತರೂ ತಮ್ಮ ಕೈಗೆ ಸಿಕ್ಕಿದ ಆಯುಧಗಳನ್ನು ಎತ್ತಿಕೊಂಡು ಈ ಸೇನೆ ಸೇರಿದರು. 'ನಮ್ಮ ಸೈನ್ಯದಲ್ಲಿ ಕೆಲಸಪಹಂಚಿಕೆಯಿದೆ. ಆದರೆ ಚಿಕ್ಕ ದೊಡ್ಡವರೆನ್ನುವ ಭೇದವಿಲ್ಲ'ವೆಂದು ಹಾನ್ ಯಿಂಗ್ ಹೇಳಿದ್ದಾನೆ. 'ರಾಜಕೀಯ ಜ್ಞಾನವಿಲ್ಲದ ಸೈನ್ಯ ದೇಶದ ಮೇಲಿ ಒಂದು ಹೊರೆ' ಎಂಬುದನ್ನು ತಿಳಿದೇ ಇವರು ತಮ್ಮ ಸೈನ್ಯಗಳ ಜತೆಗೆ ರಾಜಕೀಯ ಸೇನಾನಿಯೊಬ್ಬನನ್ನು ಕರೆದೊಯ್ಯುತಿದ್ದುದು. ಭುಜಬಲಕ್ಕೆ ತಕ್ಕಂತೆಯೇ ಬುದ್ಧಿಬಲವನ್ನೂ ಉಪಯೋಗಿಸಿದರೆ ಮಾತ್ರ ವಿಜಯ ದೊರೆತೀತು. ಇಲ್ಲದಿದ್ದರೆ ಇಲ್ಲವೆಂಬುದನ್ನು ಮೊದಲು ಅರಿತವರು ಅವರು. 'ನಾವು ಹಣಕ್ಕಾಗಿಯಾಗಲೀ, ಲೂಟಿಗಾಗಲೀ, ಇಲ್ಲವೇ ಅಧಿಕಾರಕ್ಕಾಗಲೀ

ಹೋರಾಡುತ್ತಿಲ್ಲ. ನಮ್ಮ ಹೋರಾಟ ಸಾಮಾಜಿಕ ತತ್ತ್ವಗಳಿಗಾಗಿ. ನಮಗೂ ಉಳಿದ ಸೈನ್ಯಗಳಿಗೂ ಇದೇ ವ್ಯತ್ಯಾಸ 'ವೆಂದು ನೂತನ ನಾಲ್ಕನೆಯ ದಳ ವನ್ನು ಸ್ಥಾಪಿಸುವಾಗ ಹಾನ್ ಯಿಂಗ್ ಘೋಷಿಸಿದನು. ಜಪಾನೀಯರು ಮುನ್ನಡೆದು ದೊಡ್ಡ ದೊಡ್ಡ ಪಟ್ಟಣಗಳನ್ನೂ ರೈಲುಮಾರ್ಗಗಳನ್ನೂ ಹಿಡಿ ದಂತೆಲ್ಲ, ನೂತನ ನಾಲ್ಕನೆಯ ದಳ ಒಳವಲಯಗಳನ್ನು ಹೊಕ್ಕು ಅಲ್ಲಿ ಗ್ರಾಮಸರ್ಕಾರಗಳನ್ನು ಸ್ಥಾಪಿಸಿ ಕಿಯಾಂಗ್ಸಿ ಮತ್ತು ಫ್ಯೂಕೈನ್ ಪ್ರಾಂತ್ಯಗಳ ಮೂರನೆಯ ಒಂದು ಭಾಗವನ್ನು ಸಂಪೂರ್ಣವಾಗಿ ಜಪಾನರಿಂದ ಹಿಂದಕ್ಕೆ ಕಸಿದುಕೊಂಡಿತು. ಅದರ ಮುಂದಿದ್ದ ಕಷ್ಟಗಳು ಅಸಮಾನ. . ಒಂದೆಡೆಗೆ ಜಪಾನೀಯರನ್ನೆದುರಿಸುವುದು. ಜತೆಗೆ ಹಳ್ಳಿ ಹಳ್ಳಿಗಳಲ್ಲಿದ್ದ ದರೋಡೆ ಗಾರರ ದಂಡುಗಳನ್ನೆಲ್ಲಾ ನಾಶಮಾಡಬೇಕು. ಅಥವಾ ಬೋಧನೆ ಮಾಡಿ ತಮ್ಮ ಜತೆಗೆ ಸೇರಿಸಿಕೊಳ್ಳಬೇಕು. ಕೆಲವು ಕಡೆ ಜಪಾನರು ಸ್ಥಾಪಿಸಿದ ಕೈಗೊಂಬೆ ಸರ್ಕಾರವನ್ನು ಒಡೆದು ಜನರನ್ನು ತಮ್ಮ ಕಡೆಗೆ ಒಲಿಸಿಕೊಂಡು ಸರ್ಕಾರ ಸ್ಥಾಪಿಸಬೇಕು. ನೂತನ ನಾಲ್ಕನೆಯ ದಳದ ಮುಂದಿದ್ದ ಅಗಾಧ ಪ್ರಶ್ನೆ ಇದು!

ಸಂಗ್ರಾಮದಲ್ಲಿ ವಿಜಯಿಗಳಾಗಬೇಕಾದರೆ ಜನತೆಯ ಸಂಘಟನೆಯಾಗ ಬೇಕು. ಜನರ ಗೆಳೆತನವಿಲ್ಲದೆ ಯಾವ ಸೈನ್ಯವೂ ಉಳಿಯಲಾರದು. ಸೈನ್ಯ ಗಳು ಜನರಿಗೆ ಮಾರ್ಗದರ್ಶಕರಾಗುವಂತೆ, ಆದರ್ಶ ರೀತಿ ನೀತಿಗಳನ್ನು ಅನುಸರಿಸಬೇಕು. ಇದರಿಂದ ಜನರಲ್ಲಿ ಸ್ಫೂರ್ತಿ ಬಂದು ಜನರಲ್ಲೇ ನಾಯ ಕರು ಹುಟ್ಟಿಕೊಳ್ಳುತ್ತಾರೆ. ಈ ತತ್ತ್ವವನ್ನರಿತು ಸೈನ್ಯವು ಜನತೆಯ ಕೈಯಲ್ಲಿನ ಆಯುಧವೆಂಬುದನ್ನು ತಿಳಿದು ಅನುಷ್ಠಾನಕ್ಕೆ ತಂದವರು ಕಮ್ಯುನಿಸ್ಟರು. ಅದರಿಂದಲೇ ಕೊಮಿಂಟಾಂಗ್ ಸೋತೆಡೆಗಳಲ್ಲಿ ಕೂಡ ಅವರ ಸೈನ್ಯಗಳು ಗೆಲ್ಲುತ್ತ ಬಂದುದು!

ಕೆಂಪುಸೈನ್ಯಗಳು ಶತ್ರುವಿನ ಹಿಂಬದಿಯಲ್ಲಿನ ಜನಗಳನ್ನು ಸಂಘಟಿಸ ಲಾರಂಭಿಸಿದುವು. ಜಪಾನೀಯರು ಪಟ್ಟಣಗಳನ್ನು ತಮ್ಮ ವಶಪಡಿಸಿ ಕೊಂಡಿದ್ದರೂ ಅಲ್ಲಿಂದ ಹೊರಕ್ಕೆ ೫ ಮೈಲಿಗಳ ದೂರ ಹೋಗಬೇಕಾದರೂ ಅವರಿಗೆ ಹೆದರಿಕೆಯಾಗುತ್ತಿತ್ತು. ಆಗಲೇ ಅಲ್ಲಿನ ಜನತೆ ಆತ್ಮರಕ್ಷಾಸಮಿತಿ ಗಳು, ಬೇಹುಗಾರರ ಸಂಘಗಳು, ಗೆರಿಲ್ಲಾ ದಳಗಳು ಮುಂತಾದುವುಗಳಲ್ಲಿ

ಸಂಘಟಿತವಾಗಿ ಗ್ರಾಮಸರ್ಕಾರಗಳು ಕೂಡ ಸ್ಥಾಪಿತವಾಗಿದ್ದುವು. '೩೮ ರ ಡಿಸೆಂಬರಿನ ವೇಳೆಗೆ ಈ ಆಕ್ರಮಿತ ಪ್ರದೇಶಗಳ ಗಣನೆ ತೆಗೆದುಕೊಂಡಾಗ ಕೆಲವು ಮುಖ್ಯ ವಿಷಯಗಳು ಹೊರಬಿದ್ದುವು. ಈ ಆಕ್ರಮಿತ ಪ್ರದೇಶದಲ್ಲಿದ್ದ ೭೯೬ ಜಿಲ್ಲೆಗಳಲ್ಲಿ ೪೮೫ ಜಿಲ್ಲೆಗಳು ಸಂಪೂರ್ಣವಾಗಿ ಚೀನೀ ಸರ್ಕಾರದ ಆಡಳಿತದಲ್ಲಿಯೇ ಉಳಿದಿದ್ದುವು. ಎಂದರೆ ಶೇಕಡ ೬೨ ರಷ್ಟು ಭಾಗ ಇನ್ನೂ ಚೀನೀಯರಿಗೇ ಸೇರಿದ್ದಿತು. ಕೇವಲ ಶೇಕಡ ೭ ಭಾಗ ಮಾತ್ರ ಸಂಪೂರ್ಣವಾಗಿ ಜಪಾನರ ಅಧೀನವಾಗಿದ್ದಿತು. ಉಳಿದುವು ಅರೆ ಚೀನ, ಅರೆ ಜಪಾನಿನ ಅಧಿಕಾರದಲ್ಲಿದ್ದುವು. ಚೀನವನ್ನು ಜಪಾನರು 'ಆಕ್ರಮಿಸಿದರು' ಎಂದರೆ ಕೆಲವರು ಈಜುಗಾರರು ಕೊಳವನ್ನಾಕ್ರಮಿಸಿದಂತೆಯೇ ಎಂದು ನಗೆಯಾಡಿದ್ದಾನೆ ಇಂಗ್ಲಿಷ್ ಸಾಹಿತಿ ಮೌರರ್. ಆದರೆ ಆದೇ ಚೀನೀ ಜನತೆಯ ಕೊಳದಲ್ಲಿ ಕಮ್ಯುನಿಸ್ಟರು ಮೀನುಗಳಂತಿದ್ದರೆಂಬುದನ್ನು ಎಡ್ಗರ್ ಸ್ನೋ ಮತ್ತು ಅವನ ಪತ್ನಿ ನಿಮ್ ವೇಲ್ಸ್ ಹೇಳಿದ್ದಾರೆ.

ರಾಷ್ಟ್ರೀಯ ಐಕ್ಯತೆ ಸಿದ್ಧಿಯಾದೊಡನೆಯೇ ಚಿಯಾಂಗನು ಕಮ್ಯುನಿಸ್ಟರ ದೇಶಭಕ್ತಿಯನ್ನು ಹೊಗಳಿದನು. ಕೊಮಿಂಟಾಂಗಿನ ಪ್ರತಿಗಾಮಿಗಳಿಗೆ ಅದು ಸರಿಬೀಳದಿದ್ದರೂ ಏನು ಮಾಡಲೂ ಅವರಿಂದ ಸಾಧ್ಯವಿರಲಿಲ್ಲ. ವಿಶೇಷ ಗಡಿಪ್ರಾಂತ್ಯದ ಮೇಲಿದ್ದ ಆರ್ಥಿಕ ತಡೆಯನ್ನೂ ಚಿಯಾಂಗನು ಸಡಿಲಿಸಿದನು. ಕೆಂಪುಸೈನ್ಯಗಳನ್ನು ಕೂಡಿಸಲೂ ಅಪ್ಪಣೆ ಕೊಟ್ಟನು. ಆದರೆ ದಿನೇ ದಿನೇ ಅವರು ಜಯಶಾಲಿಗಳಾಗಿ ಜನಪ್ರಿಯರಾಗಿ ಜನರನ್ನು ಸಂಘಟಿಸುವುದು ಕೊಮಿಂಟಾಂಗಿನ ಪ್ರತಿಗಾಮಿ ನಾಯಕರಿಗೆ ಸರಿಬೀಳಲಿಲ್ಲ. ಅವರು ಕಮ್ಯುನಿಸ್ಟ್ ಪಾರ್ಟಿಯ ಮೇಲಿನ ಪ್ರತಿಬಂಧಕವನ್ನು ತೆಗೆಯಲು ಒಪ್ಪಲಿಲ್ಲ. ಅಷ್ಟೇ ಅಲ್ಲ, ಷಾನ್ಸಿ ಕಾನ್ಸು ನಿಂಗ್ಸಿಯ ಗಡಿಪ್ರದೇಶವನ್ನು ವಿಶೇಷ ಪ್ರದೇಶವನ್ನಾಗಿ ಒಪ್ಪಿಕೊಳ್ಳಲಿಲ್ಲ. ಒಪ್ಪಿದವನು ಚಿಯಾಂಗ್ ಮಾತ್ರ. ಕಮ್ಯುನಿಸ್ಟರನ್ನು, ಕಾರ್ಮಿಕ ನಾಯಕರನ್ನು ಬಂಧಿಸುವುದು ಮೊದಲಿನಂತೆಯೇ ಸಾಗಿತ್ತು. ೧೯೪೧ ರಲ್ಲಿ ಕೂಡ ಒಂದೇ ಸೆರೆಮನೆಯಲ್ಲಿ ೭ ವರ್ಷಗಳ ಹಿಂದೆ ಬಂಧಿಸಲ್ಪಟ್ಟ ೬೦ ಜನರು ಇನ್ನೂ ಕೊಳೆಯುತ್ತಿದ್ದರೆಂದ ಮೇಲೆ ಅವರಿಗೆ ಎಷ್ಟರ ಮಟ್ಟಿನ ಹಕ್ಕು ಬಾಧ್ಯತೆ ದೊರಕಿತ್ತೆಂಬುದನ್ನು ಸುಲಭವಾಗಿ ಊಹಿಸಬಹುದು. ಕೊಮಿಂಟಾಂಗಿನ ರಾಜಕೀಯ ನೀತಿ

ಯನ್ನು ನಿರ್ಧರಿಸುವುದಕ್ಕಾಗಿ 'ಜನರ ರಾಜಕೀಯ ಸಮಿತಿ' [People's Political Council] ಯನ್ನು ಸ್ಥಾಪಿಸಿದರು. ಆದರೆ ಅದು ಬರಿಯ ಸಲಹೆಗಾರರ ಮಂಡಲಿಯಾಗಿದ್ದಿತೇ ವಿನಹ ಅದಕ್ಕೆ ರಾಷ್ಟ್ರದ ರಾಜಕೀಯದಲ್ಲಿ ಸ್ಥಾನವಿರಲಿಲ್ಲ. ಸಲಹೆಗಳಿಗೂ ಬೆಲೆ ಬರುತ್ತಿರಲಿಲ್ಲ. ಎಲ್ಲ ಕಡೆಗಳಲ್ಲಿಯೂ ಕಮ್ಯುನಿಸ್ಟರ ಕೊಲೆ, ಅವರ ಮೇಲೆ ಅಕ್ರಮ ಆಘಾತಗಳು ಅನಿರ್ಬಂಧವಾಗಿ ಸಾಗುತ್ತಿದ್ದುವು. ದೂರು ಹೇಳಿದಾಗ ಚಿಯಾಂಗನು ಸಾಧ್ಯವಾದಷ್ಟು ಮಟ್ಟಿಗೆ ಇದನ್ನು ತಪ್ಪಿಸುತ್ತಿದ್ದನು. ಆದರೆ ಅವನ ಸರ್ಕಾರ ಅವನ ಕೈ ಕಟ್ಟಿದ್ದಿತು.

ಕೇಂದ್ರದಲ್ಲಿ ಪ್ರಜಾಸತ್ತಾತ್ಮಕ ಸರ್ಕಾರ ಸ್ಥಾಪಿಸಿದರೆ ಮಾತ್ರ ಜಪಾನಿನ ವಿರುದ್ಧ ಸಂಗ್ರಾಮವನ್ನು ಯಶಸ್ವಿಯಾಗಿ ನಡೆಸಲು ಸಾಧ್ಯ. ಇಲ್ಲವಿದ್ದರೆ ಸಂಗ್ರಾಮ ಹೀಗೆಯೇ ಮುಂದೂ ಹಿಮ್ಮೆಟ್ಟುವುದರಲ್ಲೇ ಕೊನೆಗಾಣಬಹುದು. ಅದಕ್ಕಾಗಿ ಕೂಡಲೇ ದೇಶದಲ್ಲಿ ಸಾರ್ವತ್ರಿಕ ಚುನಾವಣೆಗಳ ಮೂಲಕ ಸರ್ಕಾರಕ್ಕೆ ಪ್ರತಿನಿಧಿಗಳನ್ನು ಚುನಾಯಿಸಿ ಪ್ರಜಾಸತ್ತಾತ್ಮಕ ಸರ್ಕಾರ ಸ್ಥಾಪಿಸಬೇಕು ಎಂದು ಐಕ್ಯತೆಯಾದಾಗಲೇ ಕಮ್ಯುನಿಸ್ಟರು ಸೂಚಿಸಿದ್ದರು. ಸಾಧ್ಯವಾದಷ್ಟು ಬೇಗನೇ ಅದನ್ನು ನೆರವೇರಿಸುವುದಾಗಿ ಚಿಯಾಂಗ್ ವಾಗ್ದಾನ ಮಾಡಿದ. ಆದರೆ ಅದು ಬರೇ ವಾಗ್ದಾನವಾಗಿಯೇ ಉಳಿದಿದೆ.

ಚೀನದಲ್ಲಿ ಸಾರ್ವತ್ರಿಕ ಚುನಾವಣೆ ನಡೆದುದು ೧೯೩೨ ರಲ್ಲಿ. ಎಂದರೆ ೧೨ ವರ್ಷಗಳ ಹಿಂದೆ. ಆಗ ಕಮ್ಯುನಿಸ್ಟರ ಮೇಲೆ ವಿಷ ಕಾರುತ್ತಿದ್ದಿತು ಕೊಮಿಂಟಾಂಗ್. ಆ ಚುನಾವಣೆಯಲ್ಲಿ ಕಾರ್ಮಿಕರಿಗಾಗಲೀ, ರೈತರಿಗಾಗಲೀ ಪ್ರಾತಿನಿಧ್ಯವಿರಲಿಲ್ಲ. ಆ ಮೇಲೆ ೧೯೩೪ ರಲ್ಲಿ ಮತ್ತೆ ಜರುಗಬೇಕಾಗಿದ್ದ ಸಾರ್ವತ್ರಿಕ ಚುನಾವಣೆಗಳಿಗಾಗಿ ಜನತೆಯ ರಾಷ್ಟ್ರೀಯ ಅಧಿವೇಶನವು ಕೂಡಬೇಕಾಗಿತ್ತು. ಚಿಯಾಂಗನೂ ಅವನ ಸಾಮ್ರಾಜ್ಯಶಾಹೀ ತಂಡವೂ ಆ ಅಧಿವೇಶನವನ್ನು ಮುಂದೆ ಹಾಕುತ್ತಾ ಬಂದಿದೆ.

"೧೯೩೪ ನೆಯ ೧೦ ರಂದೇ ಚುನಾಯಿತ ಪ್ರಾತಿನಿಧ್ಯವುಳ್ಳ ಸರ್ಕಾರದ ಆಡಳಿತ ಆರಂಭವಾಗುವುದು."

"೧೯೩೫ ನೆಯ ಏಪ್ರಿಲ್‌ನಲ್ಲಿ ರಾಷ್ಟ್ರೀಯ ಅಧಿವೇಶನ ಕೂಡಿ ಸರ್ಕಾರವನ್ನು ಚುನಾಯಿಸುತ್ತದೆ."

"೧೯೩೬ ನೆಯ ನವಂಬರ್ ೧೨ ರಂದು ರಾಷ್ಟ್ರೀಯ ಅಧಿವೇಶನ ಕೂಡುತ್ತದೆ."

"೧೯೩೭ ನೆಯ ನವಂಬರಿನಲ್ಲಿಯಾದರೂ ಕೊನೆಯ ಪಕ್ಷ ರಾಷ್ಟ್ರೀಯ ಅಧಿವೇಶನ ಕೂಡಿಯೇ ಕೂಡುತ್ತದೆ."

"೧೯೪೦ ನೆಯ ನವಂಬರ್ ೧೨ ನೆಯ ತಾರೀಕೇ ರಾಷ್ಟ್ರೀಯ ಅಧಿವೇಶನ ಕರೆಯುವ ದಿನ. ಅಲ್ಲಿಂದ ಅದನ್ನು ಮುಂದುಹಾಕುವುದು ಅಸಾಧ್ಯ."

"ಸಂಗ್ರಾಮ ಮುಗಿದ ಒಂದು ವರ್ಷದ ಮೇಲೆ ರಾಷ್ಟ್ರೀಯ ಅಧಿವೇಶನವು ಕೂಡಿ ನೂತನ ಸರ್ಕಾರದ ರಚನೆಯನ್ನು ಕೈಗೊಳ್ಳುತ್ತದೆ."

"ರಾಷ್ಟ್ರೀಯ ಅಧಿವೇಶನವನ್ನು ಕರೆಯಲು ಸಂಗ್ರಾಮ ಮುಗಿಯುವ ಆವಶ್ಯಕವೇನೂ ಇಲ್ಲ. ಸೈನ್ಯದ ಪರಿಸ್ಥಿತಿಯು ಸ್ವಲ್ಪ ಸುಸಂಘಟಿತವಾಗಿ ಭದ್ರವಾಗಿ, ನಾವೇ ಧಾಳಿ ಆರಂಭಿಸುವ ಸ್ಥಿತಿ ಬಂದೊಡನೆಯೇ ರಾಷ್ಟ್ರೀಯ ಅಧಿವೇಶನ ಕರೆಯಿರೆಂದು ಕೊಮಿಂಟಾಂಗಿನ ಕೇಂದ್ರ ಸಮಿತಿಗೆ ಸೂಚಿಸಲು ನಾನು ಸಿದ್ಧನಾಗಿದ್ದೇನೆ."

ಈ ಮಾತುಗಳೆಲ್ಲ ಚಿಯಾಂಗ್ ಕೈಷೇಕನ ಬರವಣಿಗೆಗಳಿಂದ ತೆಗೆದವು. ಕೊನೆಯದು ಮಾತ್ರ ೧೯೪೫ ನೆಯ ಜನವರಿ ೧ ರಂದು ಆತ ಆಕಾಶವಾಣಿಯ ಮೂಲಕ ಮಾಡಿದ ಭಾಷಣದ ಭಾಗ. ಇವನ್ನು ಸ್ವಲ್ಪ ವಿವೇಚಿಸಿದರೆ ಈತ ನಿಜವಾಗಿಯೂ ರಾಷ್ಟ್ರೀಯ ಅಧಿವೇಶನ ಕರೆಯುತ್ತಾನೆಯೇ ಎಂದು ಅನ್ನಿಸುವುದು ಸಹಜ. "ನಾನೇ ಚೀನ—ನಾನೆಲ್ಲಿರುವೆನೋ ಅಲ್ಲಿದೆ ಚೀನದ ಸರ್ಕಾರ" ಎಂಬ ಮಾತನ್ನಾಡುವ ಚಿಯಾಂಗ್ ಜನರಿಗೆ ನಿಜವಾಗಿಯೂ ಅಧಿಕಾರ ವಹಿಸಿ ಕೊಡುವನೇ? ಆ ಉತ್ಸುಕತೆಯಿದ್ದಿದ್ದರೆ ೧೨ ವರ್ಷಗಳಿಂದ ರಾಷ್ಟ್ರೀಯ ಅಧಿವೇಶನ ಕರೆಯುವುದನ್ನು ಏಕೆ ಮುಂದೆ ತಳ್ಳುತ್ತಿದ್ದಾನೆ? ಈ ವರ್ಷದ ಅವನ ಮಾತಿನಲ್ಲಿ ಏನಾದರೂ ಆಸೆ ಇದೆಯೇ? "ವಿಜಯ ಸನ್ನಿಹಿತವಾದಾಗ ಅಧಿವೇಶನ ಕರೆಯುವ ಕಾಲ ಬರುತ್ತದೆ. ವಿಜಯದ ಭರವಸೆ ನಮ್ಮಲ್ಲಿ ಮೂಡಿದಾಗ ಅಧಿವೇಶನವನ್ನು ಕರೆಯುವೆವು" ಎಂದೂ ಭಾಷಣದಲ್ಲಿ ಹೇಳಿದ್ದಾನೆ ಚಿಯಾಂಗ್. ಹಾಗೆಂದರೆ, ಚೀನದ ವಿಜಯದಲ್ಲಿ ಆತನಿಗೆ ಭರವಸೆಯಿಲ್ಲವೇ? ಚೀನವು ಅಜೇಯ. ಕೊನೆಯ ವರೆಗೂ ಮುಷ್ಟಿ ಹಿಡಿದು ಕಾದಿ ಜಪಾನೀ ಶತ್ರುವನ್ನು ಸದೆಬಡಿಯುತ್ತೇವೆಂದು ಘೋಷಿಸಿದ

ವೀರಾವೇಶ ಈಗ ಬತ್ತಿಹೋಯಿತೇ? ಸೈನ್ಯದ ಸ್ಥಿತಿ, ಸಂಗ್ರಾಮದ ಸ್ಥಿತಿ ಭದ್ರವಾಗುವುದೆಂದರೆ ಯಾವಾಗ? ಈ ಪ್ರಶ್ನೆಗಳೆಲ್ಲ ಏಳುತ್ತವೆ. ಅದಕ್ಕೆ ಚಿಯಾಂಗನ ಭಾಷಣದಲ್ಲಿ ಯಾವ ಉತ್ತರವೂ ನಮಗೆ ಸಿಗಲಾರದು. ಇಷ್ಟು ಮಾತ್ರ ಖಚಿತ! ಈಗ ಚುಂಗ್‌ಕಿಂಗಿನಲ್ಲಿ ಆಳುತ್ತಿರುವ ಕೊಮಿಂಟಾಂಗಿಗೆ ತನ್ನ ಅಧಿಕಾರವನ್ನು ಬಿಟ್ಟುಕೊಡಲಿಷ್ಟವಿಲ್ಲ. ಅದಕ್ಕಾಗಿ ಇಲ್ಲದ ಸಲ್ಲದ ನೆವಗಳನ್ನು ಹುಡುಕಿ ರಾಷ್ಟ್ರೀಯ ಅಧಿವೇಶನವನ್ನೂ ಸಾರ್ವತ್ರಿಕ ಚುನಾವಣೆಯನ್ನೂ ಮುಂದೆ ನೂಕುತ್ತಿದೆ. ಸಾರ್ವತ್ರಿಕ ಚುನಾವಣೆಯನ್ನು ಬೇಗ ನಡೆಸಿರೆಂದರೆ ಅದಕ್ಕೆ ಇಲ್ಲದ ಸಲ್ಲದ ಕೂಗಾಟವನ್ನೆಬ್ಬಿಸುತ್ತಿದೆ.

ಇನ್ನು ಸೈನ್ಯದ ವಿಚಾರ. ಕೆಂಪುಸೇನೆಯು ೮ನೆಯ ಸೇನೆಯಾಗಿ ಮಾರ್ಪಾಡಾದಾಗ ಚಿಯಾಂಗನು ಅದರಲ್ಲಿ ೧೪೦೦೦ ಸಂಖ್ಯೆಗೆ ಸಂಗ್ರಾಮ ಸಾಮಗ್ರಿಗಳನ್ನು ಒದಗಿಸುವ ಒಪ್ಪಂದವಾಗಿತ್ತು. ಆದರೆ ಅದು ಅವರಿಗೆ ದೊರಕಿದ್ದು ಒಂದು ಬಾರಿ ಮಾತ್ರ. ೧೯೩೮ರ ಆರಂಭದಲ್ಲಿ ಈ ಸೇನೆಗೆ ಕೆಲವು ಬಂದೂಕುಗಳೂ, ಕೆಲವು ತುಪಾಕಿಗಳೂ, ಮೆಷಿನ್‌ಗನ್‌ಗಳೂ ದೊರೆತುವು. ಆದರ ನಂತರ ಅವರಿಗೆ ಯಾವ ರೀತಿಯ ಸಹಾಯ ಕೂಡ ಕೊಟ್ಟಿಲ್ಲ. ಸಹಾಯ ಕೊಡುವ ಮಾತು ಹಾಗಿರಲಿ. ಮತ್ತೆ ಕಮ್ಯುನಿಸ್ಟರ ಮೇಲೆ ತಮ್ಮ ಅತಿ ಶ್ರೇಷ್ಠ ಸೈನ್ಯವನ್ನು ಕಾವಲಾಗಿಟ್ಟಿದ್ದಾರೆ. ಜಪಾನಿನವರು ದಿನೇ ದಿನೇ ಮುನ್ನುಗ್ಗಿದಂತೆ ಅವರನ್ನೆದುರಿಸುವುದನ್ನು ಬಿಟ್ಟು, ಜಪಾನರೊಂದಿಗೆ ನಿಜವಾಗಿಯೂ ಹೋರಾಡುತ್ತಿರುವ ೮ನೆಯ ಸೈನ್ಯದ ಮೇಲೆ ಏನಿಲ್ಲೆಂದರೂ ೧,೫೦,೦೦೦ ಸೈನಿಕರನ್ನು ಕಾವಲಾಗಿ ಹಾಕಿದ್ದಾರೆ. ಸಾಧ್ಯವಾದಷ್ಟು ೮ನೆಯ ಸೈನ್ಯವನ್ನು ಕೆಣಕುವುದು ಅವರ ಕೆಲಸ. ಅವರೊಂದಿಗೆ ಕಾದಾಡುವುದು; ವಿಶೇಷ ಪ್ರದೇಶಕ್ಕೆ ಅಡ್ಡಗಟ್ಟಾಗಿರುವುದು. ಇದಕ್ಕಾಗಿ ಅವರು ಗಡಿಪ್ರಾಂತ್ಯದ ಬಾಗಿಲಾದ ಸಿಯಾನಿನಲ್ಲೇ ತಮ್ಮ ಶಿಬಿರ ಹೂಡಿದ್ದಾರೆ. ಯಾವನಾದರೂ ೮ನೆಯ ಸೈನ್ಯದ ಸೈನಿಕ ಬಂದರೆ ಅವನನ್ನು ಬಂಧಿಸಿ ಅವನನ್ನು ಸೆರೆಗೆ ಕಳುಹಿಸುವುದು. "ಬುದ್ಧಿಯ ಶಿಕ್ಷಣಾಲಯು" ವೆಂದು ಕರೆಯುತ್ತಾರೆ ಆ ಸೆರೆಮನೆಯನ್ನು. ಕಮ್ಯುನಿಸ್ಟ್ ವಿರೋಧಿಗಳನ್ನು ತಯಾರಿಸುವ ಕಾರ್ಖಾನೆ ಇದು. ಒಂದು ಬಾರಿ ಮಾತ್ಸೇತುಂಗನನ್ನೇ ಬಂಧಿಸಿ ಅವನಿಗೆ ಬೋಧಿಸಲಾರಂಭಿಸಿದ್ದರು. ಅವನು ಕೂಡಲೇ ಚಿಯಾಂಗ

ನಿಗೆ ಈ ಅವಿಚಾರ ತಿಳಿಸಿದ ಮೇಲೆ ಆ ರೀತಿ ಆಗುವುದು ಕಡಿಮೆಯಾಯಿತು.

ಯೇನಾನ್ ಷಾನ್ಸಿ-ಕಾನ್ಸು-ನಿಂಗ್ಸಿಯ ಗಡಿಪ್ರಾಂತ್ಯದ ರಾಜಧಾನಿ. ಅಲ್ಲಿ ಜಪಾನೀ ವಿರುದ್ಧ ವಿಶ್ವವಿದ್ಯಾನಿಲಯವಿದೆ. ಚೀನದ ವಿವಿಧ ಭಾಗ ಗಳಿಂದ ಅಲ್ಲಿಗೆ ದಿನೇ ದಿನೇ ವಿದ್ಯಾರ್ಥಿಗಳು ಹೋಗುವುದು ಹೆಚ್ಚಾಗಲು ಅವರನ್ನು ತಡೆದು ಸೆರೆಗೆ ಹಾಕುವ ನೀತಿಯೂ ನಡೆಯುತ್ತಿತ್ತು. ಈಗಲೂ ಸೆರೆಹಾಕುತ್ತಿದ್ದಾರೆ.

"೮ ನೆಯ ಸೇನೆಯು ಇದುವರೆಗೂ ಏನನ್ನೂ ಮಾಡಿಲ್ಲ. ಅವರಿಂದ ಚೀನಕ್ಕೆ ಯಾವ ಉಪಯೋಗವೂ ಇಲ್ಲ. ಆ ಕಮ್ಯುನಿಸ್ಟರು ಸೈನ್ಯ ಇರಿಸಿರಲು ಅವರಿಗೆ ಅಧಿಕಾರವೇ ಇಲ್ಲ"ವೆಂದು ಕಲ್ಕತ್ತದಲ್ಲಿನ ಒಂದು ಪತ್ರಿಕಾ ಸಮ್ಮೇಳನ ದಲ್ಲಿ ಚೀನದ ವರ್ತಮಾನ ಶಾಖೆಯ ಭಾರತದ ಪ್ರತಿನಿಧಿ ಹೇಳಿದ. ಆದರೆ ನಿಜಸ್ಥಿತಿ ಹೀಗಿಲ್ಲ. ಚೀನೀ ಸೈನ್ಯಗಳು ಎಲ್ಲ ಕಡೆಯೂ ಹಿಮ್ಮೆಟ್ಟಿದಾಗ ಮೊದಲು ಜಪಾನನ್ನು ಯುದ್ಧರಂಗದಲ್ಲಿ ಸೋಲಿಸಲಾರಂಭಿಸಿದವರು ೮ ನೆಯ ಸೈನ್ಯನವರು. ಈ ಸೈನ್ಯಕ್ಕೆ ಇದುವರೆಗೂ ಚೀನದ ಸರ್ಕಾರ ಯಾವ ಶಸ್ತ್ರಾಸ್ತ್ರ ಗಳನ್ನೂ ಒದಗಿಸಿಲ್ಲ. ಇದರ ಬಳಿ ಇರುವ ಶಸ್ತ್ರಾಸ್ತ್ರಗಳೆಲ್ಲವೂ ಶತ್ರುವನ್ನು ಸೋಲಿಸಿ ಕಿತ್ತುಕೊಂಡವು.

"ನಮ್ಮ (ಜಪಾನಿನ) ಸೈನ್ಯಗಳ ಧಾಳಿಗಳಿಗೆ ಗುರಿ ಕೊಮಿಂಟಾಂಗಿನ ಸೈನ್ಯಗಳಾಗಿರದೆ ಕಮ್ಯುನಿಸ್ಟ್ ಸೈನ್ಯಗಳೇ ಆಗಿವೆ. ಇದುವರೆಗೆ ಈ ವರ್ಷ (೧೯೪೩) ನಡೆದ ೧೫೦೦೦ ಕದನಗಳಲ್ಲಿ ೧೨೦೦೦ ಕ್ಕೂ ಮೇಲ್ಪಟ್ಟು ಕದನ ಗಳು ಕಮ್ಯುನಿಸ್ಟ್ ಸೈನ್ಯಗಳೊಂದಿಗೆ" ಎಂದಿದೆ ಜಪಾನಿನ ಆಸಾಕಿ ಸಿನ್ಬನ್ ಪತ್ರಿಕೆ. ಇದಕ್ಕಿಂತಲೂ ಬೇರೆ ನಿದರ್ಶನವೇ ಬೇಕಿಲ್ಲ! ಉತ್ತರ ಚೀನದಲ್ಲಿಯೇ ಈ ಸೈನ್ಯಗಳು ಜಪಾನೀಯರಿಂದ ಸುಮಾರು ೪,೦೦೦,೦೦೦ ಜನಸಂಖ್ಯೆಯುಳ್ಳ ಪ್ರದೇಶಗಳನ್ನು ಹಿಂದಕ್ಕೆ ಕಸಿದುಕೊಂಡಿವೆ. ೧೯೪೪ರಲ್ಲಿ ನಡೆದ ಸಂಗ್ರಾಮ ಕಾಲದಲ್ಲಿ ೮ ನೆಯ ಸೈನ್ಯದ ಕಾರ್ಯಗಳನ್ನೂ, ಕೊಮಿಂ ಟಾಂಗ್ ಸೈನ್ಯಗಳು ಸಾಧಿಸಿದುದನ್ನೂ ನೋಡಿದರೆ ಯಾವ ಸೈನ್ಯ ಯುದ್ಧದಲ್ಲಿ ಹೆಚ್ಚು ಆಸಕ್ತವಾಗಿದೆಯೆಂಬುದು ವಿಶದವಾಗುತ್ತದೆ. ಕೊಮಿಂಟಾಂಗ್ ಸೈನ್ಯಗಳ ಮುಖ್ಯ ರಂಗದಲ್ಲಿ ೪೪ ದಿನಗಳಲ್ಲಿ ೪೫ ಪಟ್ಟಣಗಳು ಜಪಾನರ ವಶ ವಾದುವು; ೧೦೦,೦೦೦ ಚದರ ಕಿಲೋಮೀಟರುಗಳಷ್ಟು ಪ್ರದೇಶ ಜಪಾನರ

ವಶವಾಯಿತು; ಸುಮಾರು ೪೦೦ ಲಕ್ಷ ಮಂದಿಯ ಜನಸಂಖ್ಯೆಯ ಪ್ರದೇಶ ವನ್ನೂ ಆಕ್ರಮಿಸಿದರು. ಅದೇ ಕಾಲದಲ್ಲಿ ಕಮ್ಯುನಿಸ್ಟ್ ಸೈನ್ಯಗಳು ಶತ್ರುವಿನ ಹಿನ್ನಾಡಿನಲ್ಲಿ ೫೦,೦೦೧ ಚದರ ಕಿಲೋಮೀಟರಿನಷ್ಟು ಪ್ರದೇಶವನ್ನು ಕಸಿದು ಕೊಂಡರು. ಸುಮಾರು ೪೦ ಲಕ್ಷ ಮಂದಿಯನ್ನು ಶತ್ರುಗಳ ಬಂಧನದಿಂದ ಬಿಡುಗಡೆ ಮಾಡಿದರು. ಚೀನೀ ಸರ್ಕಾರದ ಸೈನ್ಯಗಳು ಜಪಾನೀಯರಿಗೆ ಶರಣಾಗಿ ಹೋಗುವುದು ಸಾಮಾನ್ಯದ ಸಂಗತಿ. ಆದರೆ ಇದುವರೆಗೂ ಒಂದಾದರೂ ಕಮ್ಯುನಿಸ್ಟ್ ಸೈನ್ಯ ಹಾಗೆ ಶತ್ರುವಿಗೆ ಶರಣಾಗಿಲ್ಲ! ಕೋಮಿಂ ಟಾಂಗ್ ಸೈನ್ಯಗಳು ೬ ತಿಂಗಳಿನಲ್ಲಿ ೧೧೨ ಪಟ್ಟಣಗಳನ್ನು ಜಪಾನೀಯರಿಗೆ ಒಪ್ಪಿಸಿ ಹಿಮ್ಮೆಟ್ಟಿದರು. ಅದೇ ೬ ತಿಂಗಳಿನಲ್ಲಿ ಕಮ್ಯುನಿಸ್ಟ್ ಸೈನ್ಯಗಳು ೨೮ ಪಟ್ಟಣಗಳನ್ನು ಜಪಾನೀಯರಿಂದ ಕಿತ್ತುಕೊಂಡರು. ಈ ವಿಚಾರಗಳಿಂದ ನಿಜವಾಗಿಯೂ ಚೀನದಲ್ಲಿ ಯುದ್ಧ ಮಾಡುತ್ತಿರುವವರು ಯಾರು ಎಂಬುದು ವಿಶದವಾಗುತ್ತದೆ. ಇಷ್ಟೇ ಅಲ್ಲ, ೮ ನೆಯ ಸೈನ್ಯಗಳು ಜಪಾನೀಯರಿಂದ ಯಾವುದಾದರೂ ಪ್ರದೇಶವನ್ನು ಬಿಡುಗಡೆ ಮಾಡಿದರೆ ಕೂಡಲೇ ಕೋಮಿಂ ಟಾಂಗ್ ಸೈನ್ಯಗಳು ಅಲ್ಲಿಗೆ ಬಂದು ಕಮ್ಯುನಿಸ್ಟ್ ಸೈನ್ಯಗಳ ಮೇಲೆ ಕಾದಾಟ ವಾರಂಭಿಸುತ್ತವೆ. ಆದರೆ ಜಪಾನೀ ಸೈನ್ಯಗಳು ಬಂದಾಗ ಮಾತ್ರ ಬೆನ್ನು ತಿರುವಿ ಓಡುತ್ತವೆ!

೮ ನೆಯ ಸೈನ್ಯಗಳು ೧೯೩೮ ರ ವೇಳೆಗೆ ಆಗಲೇ ೧೨೦ ಲಕ್ಷ ಜನ ಸಂಖ್ಯೆಯ ಪ್ರದೇಶವನ್ನು ಜಪಾನೀಯರಿಂದ ಕಸಿದುಕೊಂಡು ಅಲ್ಲಿ ಷಾನ್ಸಿ-ಹುನಾನ್-ಹೋಪೇ ಪ್ರಾಂತ್ಯ ಸರ್ಕಾರವನ್ನು ಚಿಯಾಂಗನ ಅನುಮತಿಯಂತೆ ಸ್ಥಾಪಿಸಿದವು. ಅಲ್ಲಿ ಕೂಡ ಕಮ್ಯುನಿಸ್ಟರು ೩ ಮಂದಿಗೆ, ಕೋಮಿಂಟಾಂಗಿ ನವರು ೩ ಮಂದಿ ಮತ್ತು ಇತರ ಜಪಾನೀ ವಿರೋಧಿ ಪಂಗಡದವರು ೩ ಮಂದಿ ಸರ್ಕಾರದಲ್ಲಿರಬೇಕೆಂಬ ತತ್ವ ಅನುಸರಿಸಿದ್ದಾರೆ. ೧೯೩೮ ರಲ್ಲಿ ಷಾನ್ಸಿ-ಹೋಪೆ-ಚಹಾರ್ ಸರ್ಕಾರ ಕೂಡ ಸ್ಥಾಪಿತವಾಯಿತು. ೧೯೪೦ ರ ವೇಳೆಗೆ ಇವರ ಆಡಳಿತವಲ್ಲಿ ೭೦ ಜಿಲ್ಲೆಗಳು ಸೇರಿದ್ದುವು. ಇದು ಕಮ್ಯುನಿಸ್ಟ್ ಸೈನ್ಯ ಗಳು ನಡೆಸುವ ಕಾರ್ಯ. ಆದರೆ ಕೋಮಿಂಟಾಂಗ್ ಸೈನ್ಯಗಳ ಕಾರ್ಯ? ಅದಕ್ಕೆ ಒಂದು ಉದಾಹರಣೆಯೇ ಸಾಕು!

೧೯೩೭ ರಿಂದ '೩೯ ರ ವರೆಗೂ ಕಮ್ಯುನಿಸ್ಟ್ ಸೈನ್ಯಗಳಿಗೂ ಕೋಮಿಂ

ಟಾಂಗ್ ಸೈನ್ಯಗಳಿಗೂ ನಡುವೆ ಯಾವ ಕಾದಾಟವೂ ಆಗಲಿಲ್ಲ. ಆದರೆ '೩೯ ರಲ್ಲಿ ಇದು ಮತ್ತೆ ಆರಂಭವಾಯಿತು. ಆ ವೇಳೆಗೆ ಗಡಿನಾಡಿನ ವಿಶೇಷ ಪ್ರಾಂತ್ಯದ ಮೇಲೆ ಹಿಂದಿನಂತೆಯೇ ಆರ್ಥಿಕ ತಡೆಯೂ ಹಾಕಲ್ಪಟ್ಟಿತ್ತು. ಆ ಪ್ರಾಂತ್ಯದಿಂದ ಸುದ್ದಿಗಳೂ ಹೊರಬೀಳದಂತಾಯಿತು. ೧೯೪೪ ರ ವರೆಗೂ ಈ ತಡೆಯನ್ನು ತೆಗೆಯಲೇ ಇಲ್ಲ. ವಿದೇಶೀಯ ಪತ್ರಿಕೆಯ ಬಾತ್ಮೀದಾರರು ಕಾದು ಕಾದು ಕೊನೆಗೆ ಕಮ್ಯುನಿಸ್ಟ್ ಪ್ರಾಂತ್ಯಗಳನ್ನು ನೋಡದೆ ಹಾಗೆಯೇ ಹಿಂತಿರುಗಬೇಕಾಗುತ್ತಿತ್ತು. ಆದರೆ ೧೯೪೪ ರಲ್ಲಿ ಈ ತಡೆ ಸ್ವಲ್ಪ ಸಡಿಲವಾಗಿದೆ. ಈ ಪ್ರಾಂತ್ಯಕ್ಕೆ ೨೩ ಜಿಲ್ಲೆಗಳು ಸೇರಿದ್ದುವು. ಆದರೆ ಆ ಪ್ರಾಂತ್ಯವನ್ನು ಕ್ರಮಬದ್ಧವೆಂದು ಕೊಮಿಂಟಾಂಗ್ ಸರ್ಕಾರವು ಒಪ್ಪಿರಲಿಲ್ಲ—ಈಗಲೂ ಒಪ್ಪಿಲ್ಲ. ಷೇನ್ಸಿ ಪ್ರಾಂತ್ಯದ ಪಾಳೆಯಗಾರನನ್ನು ಕೊಮಿಂಟಾಂಗ್ ಸರ್ಕಾರವು ಎತ್ತಿ ಕಟ್ಟಿ ಅವನು ಷೆನ್ಸಿ-ಕಾನ್ಸು-ನಿಂಗ್ಸಿಯ ಗಡಿಯ ಕಮ್ಯುನಿಸ್ಟ್ ಪ್ರಾಂತ್ಯವನ್ನು ಮುತ್ತಿ ಆಕ್ರಮಿಸುವಂತೆ ಪ್ರೇರೇಪಿಸಿ, ಸೈನ್ಯಗಳನ್ನು ಕೂಡ ಒದಗಿಸಿತು. ಪಾಳೆಯಗಾರನು ೪ ಜಿಲ್ಲೆಗಳನ್ನು ಆಕ್ರಮಿಸಿ ಮುಂದರಿಯಲಾರಂಭಿಸಿದ. ಕೊಮಿಂಟಾಂಗಿನೊಂದಿಗೆ ವೈಷಮ್ಯವಿರಬಾರದೆಂದು ಕಮ್ಯುನಿಸ್ಟ್ ಸೈನ್ಯಗಳು ಯುದ್ಧಮಾಡದೆ ಹಿಂದೆ ಹೋಗುತ್ತಿದ್ದವು. ಕೊನೆಗೆ ತಡೆಯಲಾಗದೆ ೮ ನೆಯ ಸೈನ್ಯವನ್ನು ಅಲ್ಲಿಗೆ ಕರೆಸಿಕೊಂಡರು. ಕೂಡಲೇ ಕೊಮಿಂಟಾಂಗಿನ ದುರ್ಯೋಜನೆ ನಿಂತಿತು. ಆದರೆ ಕಳೆದುಹೋದ ನಾಲ್ಕು ಜಿಲ್ಲೆಗಳು ಮತ್ತೆ ಕೊಡಲ್ಪಡಲೇ ಇಲ್ಲ.

೧೯೩೯ ರಿಂದೀಚೆಗೆ ಇಂತಹ ಘಟನೆಗಳು ಸಾಧಾರಣ. ಚಿಯಾಂಗ್ ಯಾವುದನ್ನೂ ಕಿವಿಗೇ ಹಾಕಿಕೊಳ್ಳುತ್ತಿರಲಿಲ್ಲ. ಕೊನೆಗೆ ೧೯೪೩ ರಲ್ಲಿ ಕಮ್ಯುನಿಸ್ಟರು ಇನ್ನುಮೇಲೆ ಕೊಮಿಂಟಾಂಗ್ ಸೈನ್ಯಗಳು ತಮ್ಮನ್ನು ಕೆಣಕಿದರೆ ಅವುಗಳನ್ನೆದುರಿಸಿ ನಾಶಗೊಳಿಸುವ ದೃಢ ನಿಶ್ಚಯ ತೋರಿದ ಮೇಲೆ ಈ ರೀತಿಯ ಘಟನೆಗಳು ಜರುಗುತ್ತಿಲ್ಲ. ಚುಟೇ ಇಂತಹ ಅಪಚಾರವಾಗದಂತೆ ಕೇಳಿಕೊಂಡಿದ್ದರೂ, ಚಿಯಾಂಗ್ ಇದಕ್ಕೆ ಕಿವಿಗೊಡಲಿಲ್ಲ. ಇವುಗಳಲ್ಲೆಲ್ಲ ಅತಿ ದೊಡ್ಡದೆಂದರೆ ದಕ್ಷಿಣ ಆನ್ಹ್ವೆಯ್ ಘಟನೆ.

ಯಾಂಗ್ಟ್ಸಿ ನದಿಯ ಕೆಳ ಕಣಿವೆಯಲ್ಲಿ ನೆಲೆಮಾಡಿಕೊಂಡಿದ್ದ ಕೆಂಪು ಸೇನೆಯ ನೂತನ ನಾಲ್ಕನೆಯ ಸೈನ್ಯದಲ್ಲಿ ಮೊದಲು ನಾಲ್ಕು ದಳಗಳಿದ್ದುವು.

೫ ನೆಯ ೬ ನೆಯ ದಳಗಳೂ ಕ್ರಮೇಣ ಇದನ್ನು ಸೇರಿದುವು. ಇದರ ಬಲ ೫೦ ಸಾವಿರಕ್ಕೂ ಹೆಚ್ಚಾಯಿತು. ಇದು ಕೊಮಿಂಟಾಂಗಿಗೆ ಸರಿಬೀಳಲಿಲ್ಲ. ಈ ಸೇನೆಯ ಸುತ್ತಲೂ ಜನರಲ್ ಕುಚು ಟಾಂಗನ ಸೇನೆ ಕಾವಲು ನಡೆಸುತ್ತಿತ್ತು; ಈ ಸೇನೆಗೆ ಬರಬೇಕಾದ ವರಮಾನವನ್ನು ತಾನೇ ವಶಪಡಿಸಿಕೊಳ್ಳುತ್ತಿತ್ತು.

"ಈ ನಾಲ್ಕನೇ ಸೇನೆ ಉತ್ತರದಲ್ಲಿರುವ ೮ ನೇ ಸೇನೆಯನ್ನು ಸೇರಿಕೊಳ್ಳ ಬೇಕೆಂದು ಪದೇ ಪದೇ ಆಜ್ಞೆ ಬಂತು. ಹೀಗೆ ಹೋಗುವದರಿಂದ ಜಪಾನರಿಗೆ ಸಹಾಯವಾಗುತ್ತದೆ ಎಂತ ತಿಳಿಸಿದರೂ ಕೊಮಿಂಟಾಂಗ್ ಯುದ್ಧಮಂತ್ರಿ ಒಪ್ಪಲಿಲ್ಲ. ಕೊನೆಗೆ ಈ ಸೇನೆ ನಡೆಯಲೇ ಬೇಕಾಯಿತು. ಕೆಲಭಾಗ ಸುಗಮವಾಗಿ ಸಾಗಿತು. ಉಳಿದ ನಾಲ್ಕು ಸಾವಿರ ಸೈನಿಕರೂ ೬ ಸಾವಿರ ಹೆಂಗಸರೂ ಮಕ್ಕಳೂ ಹೀಗೆ ಸಾಗುತ್ತಿದ್ದಾಗ ೮೦ ಸಾವಿರ ಕೊಮಿಂಟಾಂಗ್ ಸೇನೆಗಳು ಅವರನ್ನು ಮುತ್ತಿ ಗುಂಡಿನ ಮಳೆಗರೆದುವು. ೨ ಸಾವಿರ ಸೈನಿಕರು ಸತ್ತರು. ೪ ಸಾವಿರ ಜನ ಗಾಯಗೊಂಡರು. ಜನರಲ್ ಯೇಟಿಂಗ್ ಸೆರೆಯಾದ; ಇನ್ನೂ ಆತನ ವಿಚಾರ ತಿಳಿದುಬಂದಿಲ್ಲ. ಈ ಹಿಂಸೆಗಳ ನಂತರ ನಾಲ್ಕನೇ ಸೇನೆಯನ್ನು ರದ್ದುಗೊಳಿಸುವ ಆಜ್ಞೆ ಸರಕಾರದಿಂದ ಬಂತು. ಸರಕಾರದ ಈ ಅನೀತಿಯನ್ನು ಖಂಡಿಸಿ ಆಜ್ಞೆಯನ್ನು ಪ್ರತಿಭಟಿಸಿ ಚುಟೇ ಮತ್ತು ಪೆಂಗ್ ಟೇಹ್ವೇ ಕೊಮಿಂಟಾಂಗಿಗೆ ತಂತಿ ಕಳುಹಿದರು.

"ಕೂಡಲೇ ನೈಋತ್ಯದಲ್ಲಿ ಕಮ್ಯುನಿಸ್ಟರ ಮೇಲೆ ದಿಗ್ಬಂಧವಾಗಿರುವ ಸೈನ್ಯಗಳನ್ನು ಹಿಂದಕ್ಕೆ ಕರೆಸಿ, ಅಡ್ಡಗಟ್ಟೆಯನ್ನು ಸಡಲಿಸಬೇಕೆಂದೂ, ದೇಶದ ಎಲ್ಲೆಲ್ಲಿಯೂ ಕಮ್ಯುನಿಸ್ಟರನ್ನು ಹಿಡಿಯುವ ಮತ್ತು ಕೊಲೆಮಾಡುವ ಆತ್ಮಘಾತಕ ನೀತಿಯನ್ನು ವರ್ಜಿಸಬೇಕೆಂದೂ ನಾವು ಸರ್ಕಾರವನ್ನು ಕೋರುತ್ತೇವೆ. ಈ ನಮ್ಮ ಕೇಳಿಕೆಗಳನ್ನೊಪ್ಪಿದರೆ ಮಾತ್ರ ಮುಂದೆ ಸಹಕಾರ ಸಾಧ್ಯವಾದೀತು. ಈಗಾಗಲೇ ಚೀನದ ಕಮ್ಯುನಿಸ್ಟರಾದ ನಾವು ಸಾಕಷ್ಟು ರಿಯಾಯಿತಿ ತೋರಿಸಿ ಹಕ್ಕುಗಳನ್ನು ಬಿಟ್ಟುಕೊಟ್ಟಿದ್ದೇವೆ. ಆದರೆ ಇದಕ್ಕಿಂತ ಇನ್ನು ಮುಂದೆ ಹೋಗಲು ಸಾಧ್ಯವಿಲ್ಲ. ಸರ್ಕಾರವೂ, ಕೊಮಿಂಟಾಂಗ್ ಪಕ್ಷವೂ ಬೆಂಕಿಯೊಂದಿಗೆ ಆಡುವುದಿಲ್ಲವೆಂದು ನಾವು ಆಶಿಸುತ್ತೇವೆ. ಆದರೆ ಅವರು, ಬೆಂಕಿಯೊಡನೆ ಆಡುವ ಹಟ ತೊಟ್ಟು ತಮ್ಮನ್ನೇ ಸುಟ್ಟುಕೊಂಡರೆ ಅದಕ್ಕೆ ನಾವು ಜವಾಬ್ದಾರರಲ್ಲ."

ಈ ತಂತಿಯನ್ನು ಕಳುಹಿಸಿ ಚೀನೀ ಕಮ್ಯುನಿಸ್ಟ್ ಪಾರ್ಟಿಯು ಕೂಡಲೆ ನೂತನ ನಾಲ್ಕನೆಯ ಸೈನ್ಯವನ್ನು ಪುನಃ ಕೂಡಿಸಬೇಕೆಂದು ನಾಯಕ ಚೆನ್‌ಯಿಗೆ ಅಪ್ಪಣೆ ಕೊಟ್ಟಿತು. ಕಮ್ಯುನಿಸ್ಟ್ ಪಾರ್ಟಿಯ ಯುದ್ಧಸಮಿತಿಯ ನಾಯಕನು ಚೀನದ ಸರ್ಕಾರದ ಕೆಲವು ಅಧಿಕಾರಿಗಳು ಜಪಾನಿನೊಂದಿಗೆ ಸಂಬಂಧ ಹೊಂದಿ ಕೃತ್ರಿಮ ರಾಷ್ಟ್ರೀಯತೆ ತೋರುತ್ತಿರುವುದನ್ನು ಬಹಿರಂಗಪಡಿಸಿದನು. ಹೊಸದಾಗಿ ರಚಿತವಾದ ನೂತನ ನಾಲ್ಕನೆಯ ಸೈನ್ಯದ ಅಥವಾ ಯಾವುದಾದರೂ ಕಮ್ಯುನಿಸ್ಟ್ ಸೈನ್ಯದ ತಂಟೆಗೆ ಕೊಮಿಂಟಾಂಗ್ ಸೈನ್ಯಗಳು ಬಂದರೆ, ಖಂಡಿತವಾಗಿ ಸುಮ್ಮನಿರಲು ಸಾಧ್ಯವಿಲ್ಲವೆಂದು ಕಮ್ಯುನಿಸ್ಟರು ಚಿಯಾಂಗನಿಗೆ ಎಚ್ಚರಿಕೆ ಕೊಟ್ಟು ನೂತನ ನಾಲ್ಕನೆಯ ಸೈನ್ಯವನ್ನು ಪುನಃ ರಚಿಸಿದರು. ಆ ಮೇಲೆ ಮತ್ತೆ ಇಂತಹ ಘಟನೆಗಳು ಯಾವುದೂ ಜರುಗಿಲ್ಲ.

ಆದರೆ ರಾಷ್ಟ್ರೀಯ ಐಕ್ಯ ಮಾತ್ರ ಇನ್ನೂ ಸಾಧ್ಯವಾಗಿಲ್ಲ. ೧೯೪೩ರಲ್ಲಿ ಚಿಯಾಂಗ್ ಪ್ರಕಟಿಸಿದ 'ಚೀನದ ಭವಿಷ್ಯ' [China's Destiny] ಪುಸ್ತಕದಲ್ಲಿ ಕಮ್ಯುನಿಸ್ಟರನ್ನು ಮಾತ್ರವೇ ಅಲ್ಲದೆ ಮಿತವಾದಿಗಳನ್ನು ಕೂಡ ಖಂಡಿಸಿದ್ದಾನೆ. ಆ ಪುಸ್ತಕವನ್ನು ಬರೆದ ಅಭಿಪ್ರಾಯವೇ ಪ್ರಗತಿಗಾಮಿಗಳನ್ನು ಖಂಡಿಸುವುದಾಗಿರಬೇಕು.

೧೯೪೪ರಲ್ಲಿ "ಸ್ವಾತಂತ್ರ್ಯ ದೈನಿಕ" [Liberation Daily] ಪತ್ರಿಕೆಯಲ್ಲಿ ಕಮ್ಯುನಿಸ್ಟ್ ನಾಯಕರ ಹೇಳಿಕೆಯೊಂದು ಪ್ರಕಟವಾಗಿತ್ತು. ಕಮ್ಯುನಿಸ್ಟರು ಹೇಗೆ ಚಿಯಾಂಗನಲ್ಲಿಯೇ ಚೀನದ ಉಳಿವಿನ ನಾಯಕನನ್ನು ಕಾಣುತ್ತಿದ್ದಾರೆ. ಅದಕ್ಕಾಗಿ ೫ ವರ್ಷಗಳಿಂದ ಯಾವ ರೀತಿಯಲ್ಲಿ ಕಷ್ಟಪಟ್ಟಿದ್ದಾರೆಂಬುದನ್ನೂ, ಮುಂದೆ ಕೂಡ ದೃಢತೆಯಿಂದ ಚಿಯಾಂಗನ ನಾಯಕತ್ವದಲ್ಲಿ ಜಪಾನನ್ನು ಎದುರಿಸುವುದಾಗಿಯೂ, ವಿಜಯದಲ್ಲಿ ತಮಗೆ ಅಚಲ ನಂಬಿಕೆಯಿರುವುದಾಗಿಯೂ ಕಮ್ಯುನಿಸ್ಟ್ ನಾಯಕರು ಘೋಷಿಸಿದ್ದಾರೆ.

ಕಮ್ಯುನಿಸ್ಟ್ ಪಾರ್ಟಿಯ ಪ್ರತಿಯೊಂದು ಘೋಷಣೆಯೂ ಜಪಾನೀ ವಿರುದ್ಧ ಸಂಗ್ರಾಮಕ್ಕಾಗಿ ಚೀನದಲ್ಲಿ ಐಕ್ಯತೆಯ ಅವಶ್ಯಕತೆಯನ್ನು ಒತ್ತಿ ಒತ್ತಿ ಹೇಳುತ್ತದೆ. ಜಪಾನನ್ನು ಚೀನದಿಂದ ಓಡಿಸಬೇಕಾದರೆ ರಾಷ್ಟ್ರೀಯ ಐಕ್ಯವಿಲ್ಲದಿದ್ದರೆ ಅಸಾಧ್ಯವೆಂಬುದನ್ನು ತೋರಿಕೊಡುತ್ತಿದ್ದಾರೆ ಮತ್ತು ಆ ಐಕ್ಯತೆಗಾಗಿ ದುಡಿಯುತ್ತಿದ್ದಾರೆ ಚೀನದ ಕಮ್ಯುನಿಸ್ಟರು.

"ಕೊಮಿಂಟಾಂಗಿನಲ್ಲಿರುವ ಹೇಡಿಗಳೂ, ಶತ್ರುಗಳಿಗೆ ಶರಣಾಗಲಿಚ್ಛಿಸುವ ರಾಷ್ಟ್ರದ್ರೋಹಿಗಳೂ ಜಪಾನೀಯರನ್ನುವಂತೆಯೇ 'ಕಮ್ಯುನಿಸ್ಟರ ಧ್ವಂಸ'ದ ಮಾತುಗಳನ್ನು ನುಡಿಯುತ್ತಿದ್ದಾರೆ. ಕೊಮಿಂಟಾಂಗ್ ನೈಋತ್ಯದಲ್ಲಿ ಈಗಾಗಲೇ ೫೦೦,೦೦೦ ಸೈನ್ಯವನ್ನು ಕೂಡಿಸಿದೆ. ಯೆನಾನನ್ನು ಆಕ್ರಮಿಸುವ ಪ್ರಶ್ನೆ ಪ್ರಶ್ನೆಯಾಗಿ ಉಳಿಯಬಾರದು ಎಂಬುದೇ ಅವರ ಮಾತು. ಈ ವರ್ಷ (೧೯೪೩ರಲ್ಲಿ) ಜೂನ್ ಮತ್ತು ಜುಲೈಗಳಲ್ಲಿ ಕಮ್ಯುನಿಸ್ಟರ ಮೇಲೆ ಪ್ರಚಂಡ ಆಘಾತ ನಡೆಸಲು ಯತ್ನ ನಡೆದಿತ್ತು. ಕೊಮಿಂಟಾಂಗ್ ಸೈನ್ಯಗಳು ಕಮ್ಯುನಿಸ್ಟ್ ವಿರೋಧ ಕ್ರಮದಲ್ಲಿ ಕಾರ್ಯಕರ್ತರಾಗಿದ್ದು, ಜಪಾನೀ ವಿರೋಧ ಕ್ರಮದಲ್ಲಿ ತೆಪ್ಪಗಿವೆ. ಆದರೆ ಕಮ್ಯುನಿಸ್ಟರು ಇದುವರೆಗೂ ತಡೆದು ಬಂದಿದ್ದಾರೆ. ಇನ್ನು ಮೇಲೆ ಹೀಗೆ ತಡೆಯುವುದು ಅಸಾಧ್ಯ. ಕೊಮಿಂಟಾಂಗ್ ಸೈನ್ಯ ಮೊಟ್ಟೆಗಳ ಬುಟ್ಟಿಯಂತೆ—ಒಂದೇಟು ಬಿದ್ದರೆ ಎಲ್ಲವೂ ಚೂರು!" ಎಂದಿದೆ ಇದೇ ಪತ್ರಿಕೆ ೧೯೪೩ರ ಅಕ್ಟೋಬರ್ ೬ರ ಸಂಚಿಕೆಯಲ್ಲಿ.

೧೯೪೩ರಲ್ಲಿ ಚಿಯಾಂಗನ ೫ ಲಕ್ಷ ಸೈನ್ಯ ಕಮ್ಯುನಿಸ್ಟರ ಮೇಲೆ ನಡೆಸಿದ ಆಘಾತ ವಿಫಲವಾಯಿತು. ಅದಕ್ಕೆ ಕಾರಣ ಚೀನದ ಸಾಮಾನ್ಯ ಜನರಲ್ಲಿನ ಅಂತರ್ಯುದ್ಧದ ವಿರುದ್ಧ ಭಾವನೆ. ಜಪಾನೀ ವಿರುದ್ಧ ಯುದ್ಧವನ್ನು ಮುಂದುವರಿಸಲು ರಾಷ್ಟ್ರೀಯ ಐಕ್ಯ ಸಿದ್ಧಿಯಾಗಲೇಬೇಕೆಂಬ ಆಶಯ. ಅಲ್ಲದೆ ಅಮೆರಿಕ ಕೂಡ ಅಂತರ್ಯುದ್ಧ ಕೊನೆಗಾಣಬೇಕೆಂದೂ ಕಮ್ಯುನಿಸ್ಟರೊಂದಿಗೆ ಕೊಮಿಂಟಾಂಗ್ ಐಕ್ಯ ಸಾಧಿಸಬೇಕೆಂದೂ ಒತ್ತಾಯಪೂರ್ವಕ ತಿಳಿಸಿದೆ.

ಕೊಮಿಂಟಾಂಗ್ ಅನುಸರಿಸುತ್ತಿದ್ದ ಮತ್ತು ಅನುಸರಿಸುತ್ತಿರುವ ಕಮ್ಯುನಿಸ್ಟ್ ವಿರೋಧ ನೀತಿಯು ಮಿತ್ರರಾಷ್ಟ್ರಗಳ ಸಂಗ್ರಾಮ ಪ್ರಯತ್ನದಲ್ಲಿ ಅಡ್ಡಿ ತಂದಿರುವುದನ್ನು ಜ. ಸ್ಟಿಲ್‌ವೆಲ್ ಖಂಡಿಸಿದ. ಪರಿಣಾಮವಾಗಿ ಚಿಯಾಂಗನಿಗೂ ಆತನಿಗೂ ಭಿನ್ನಾಭಿಪ್ರಾಯ ಒದಗಿತು. ಸ್ಟಿಲ್‌ವೆಲ್ ಅಮೆರಿಕಕ್ಕೆ ಹಿಂದಿರುಗಬೇಕಾಯಿತು. ಈಗ ಚೀನದಲ್ಲಿ ಜಪಾನೀಯರು ಮತ್ತೆ ಮುನ್ನಡೆಯುತ್ತಿದ್ದಾರೆ. ಅಮೆರಿಕದ ವಿಮಾನ ನೆಲೆಗಳಲ್ಲಿ ಏಳು ಮುಖ್ಯವಾದ ನೆಲೆಗಳು ಜಪಾನೀಯರ ವಶವಾಗಿವೆ. ಅದೂ ಈಚೆಗೆ ೧ ತಿಂಗಳಿನಲ್ಲಿ. ಈಗ ಚೀನಕ್ಕುಳಿದಿರುವ ಹಾದಿ ಒಂದೇ—ಅದು ರಾಷ್ಟ್ರೀಯ

ಐಕ್ಯ. ರಾಷ್ಟ್ರೀಯ ಐಕ್ಯ ಸಾಧಿಸಲು ಕಮ್ಯುನಿಸ್ಟ್ ಪಾರ್ಟಿಯು ಯಾವಾಗಲೂ ಸಿದ್ಧವಾಗಿದೆ. ಆದರೆ ಕೊಮಿಂಟಾಂಗ್ ಮಾತ್ರ ಇನ್ನೂ ಪ್ರತಿಗಾಮಿಗಳ ಪ್ರಭಾವದಲ್ಲಿ ಉಳಿದು ಹಿಂದೆಗೆಯುತ್ತಿದೆ. ಚೀನ ಜಪಾನರ ವಶವಾದರೂ ಅವರಿಗೆ ಸಮ್ಮತವೇ. ಆದರೆ ಕಮ್ಯುನಿಸ್ಟರು ಮಾತ್ರ ಉಳಿಯಬಾರದು. ಚಿಯಾಂಗನ ಮುಂದೆ ಕಮ್ಯುನಿಸ್ಟರ ಪ್ರತಿನಿಧಿ ಚೌ-ಎನ್-ಲೈ ಹಲವು ಅಂಶಗಳಿಂದ ಕೂಡಿದ ಒಪ್ಪಂದವನ್ನು ಇಟ್ಟಿದ್ದಾನೆ. ಅದನ್ನು ಚಿಯಾಂಗನು ರಾಷ್ಟ್ರದ ಹಿತದ ದೃಷ್ಟಿಯಿಂದ ಒಪ್ಪಿದರೆ ಮಾತ್ರ ನಾಳಿನ ಚೀನ ಉಳಿದೀತು. ದಾಸ್ಯ ಚೀನವಾಗದೆ ನಾಳಿನ ಚೀನ ಖಂಡಿತವಾಗಿಯೂ ನೂತನ ಚೀನವಾದೀತು. ಈ ಅಂಶಗಳು ಯಾವುವೆಂದರೆ—

ಮಿತ್ರರೊಂದಿಗೆ ಹೆಚ್ಚು ಸಹಕರಿಸಿ ಸಂಗ್ರಾಮವನ್ನು ಯಶಸ್ವಿಯಾಗಿ ನಡೆಸಲು ಕೂಡಲೇ ಕೊಮಿಂಟಾಂಗ್ ಸರ್ಕಾರವು ಅವಸರದ ರಾಷ್ಟ್ರೀಯ ಅಧಿವೇಶನವನ್ನು ಕರೆಯಬೇಕು.

೧. ಈ ಅಧಿವೇಶನಕ್ಕೆ ಎಲ್ಲಾ ಜಪಾನ್ ವಿರೋಧೀ ಪಕ್ಷಗಳ ಪ್ರತಿನಿಧಿಗಳು ಬರಬೇಕು. ಪ್ರತಿನಿಧಿಗಳು ವಿವಿಧ ಪಕ್ಷಗಳಿಂದ ಅವರವರ ಸಂಖ್ಯೆಗೆ ತಕ್ಕಂತೆ ಚುನಾಯಿತರಾಗಿರಬೇಕು.

೨. ಈ ಅಧಿವೇಶನವನ್ನು ಇನ್ನು ತಡಮಾಡದೆ ಕೂಡಲೇ ಕರೆಯಬೇಕು. ಹಾಗಾದರೆ ಮಾತ್ರ ನಾಡಿನ ಅನಾಯಕತೆಯು ಅಂತ್ಯವಾದೀತು.

೩. ಇಂದು ಕೊಮಿಂಟಾಂಗ್ ಸರ್ಕಾರವು ಅನುಸರಿಸುತ್ತಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸೈನ್ಯ ಸಂಬಂಧದ ತಪ್ಪು ನೀತಿಯನ್ನು ಸರಿಪಡಿಸುವುದಕ್ಕಾಗಿ ಡಾ. ಸನ್-ಯುತ್-ಸೇನನ 'ಜನತೆಯ ಮೂರು ತತ್ವ'ಗಳ ಆಧಾರದ ಮೇಲೆ ನೂತನ ನೀತಿಯನ್ನು ಕೈಗೊಳ್ಳಬೇಕು.

೪. ಈಗಿರುವ ಏಕಪಕ್ಷ ಸರ್ಕಾರವು ನಿಲ್ಲಬೇಕು. ಅದರ ಸ್ಥಾನದಲ್ಲಿ ವಿವಿಧ ಪಕ್ಷಗಳ ನಾಯಕರಿಂದ ಕೂಡಿದ ಪ್ರಜಾಸತ್ತಾತ್ಮಕ ಸರ್ವಪಕ್ಷದ ಮಿಶ್ರ ಸರ್ಕಾರ ಏರ್ಪಡಬೇಕು. ಆ ಸರ್ಕಾರದಲ್ಲಿ ನಿಜವಾಗಿಯೂ ಪ್ರಜಾಸತ್ತಾತ್ಮಕ ನೀತಿಯೇ ಮುಖ್ಯವಾಗುವಂತೆ ಮಾಡಲು, ಫಾಸಿಸ್ಟ್ ಜಪಾನಿನ ಮಿತ್ರರಾದವರನ್ನು, ರಾಷ್ಟ್ರದ್ರೋಹಿಗಳನ್ನು ಆ ಸರ್ಕಾರದಿಂದ ತೆಗೆಯಬೇಕು.

೫. ಜಪಾನೀ ವಿರುದ್ಧ ಸಂಗ್ರಾಮದಲ್ಲಿ ಜಯ ಒದಗುವಂತೆ ಮಾಡಲು

ನೂತನ ನಾಯಕತ್ವ ಬೇಕು. ಆ ನಾಯಕತ್ವವನ್ನು ರಚಿಸುವ ಹಕ್ಕು ಆ ಸರ್ಕಾರಕ್ಕಿರತಕ್ಕದ್ದು.

೬. ಮಿಶ್ರಸರ್ಕಾರ ಆದೊಡನೆಯೇ ಜನತೆಯ ರಾಷ್ಟ್ರೀಯ ಅಧಿವೇಶನವನ್ನು ಕರೆಯುವ ಕಾರ್ಯಕ್ಕೆ ತೊಡಗೋಣ.

ಈ ೬ ಅಂಶಗಳ ಮೇಲೆ ರಚಿತವಾದ ರಾಷ್ಟ್ರೀಯ ಅಧಿವೇಶನ ಮತ್ತು ಮಿಶ್ರ ಸರ್ಕಾರಗಳಿಂದ ಮಾತ್ರ ಜಪಾನಿನ ವಿರುದ್ಧ ಸಂಗ್ರಾಮವನ್ನು ಫಲಕಾರಿಯನ್ನಾಗಿಸಲು ಸಾಧ್ಯ. ಏಕಪಕ್ಷ ಸರ್ಕಾರ ಮತ್ತು ಸೈನಿಕ ರಾಜ್ಯಗಳಿಂದ ರಾಷ್ಟ್ರೀಯ ಐಕ್ಯ ಸಾಧಿಸುವುದು ಅಸಾಧ್ಯ. ರಾಷ್ಟ್ರೀಯ ಐಕ್ಯವನ್ನು ಮತ್ತೆ ಸಾಧಿಸಬೇಕಾದರೆ ಚಿಯಾಂಗ್ ಜನತೆಯ ಶಕ್ತಿಗೆ ತಲೆಬಾಗಿಸಲೇ ಬೇಕು. ಜನತೆಯಿಂದ ಚುನಾಯಿತರಾದ ಪ್ರತಿನಿಧಿಗಳ ಸರ್ಕಾರವನ್ನು ಸ್ಥಾಪಿಸಿ, ಜನತೆಯೆಲ್ಲವನ್ನೂ ತನ್ನ ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಈಗಲಂತೂ ಚೀನದ ಸ್ಥಿತಿ ವಿಷಮಿಸಿದೆ. ಆರ್ಥಿಕ ಸ್ಥಿತಿ ಹೇಳತೀರದಷ್ಟು ಕೆಟ್ಟಿದೆ. ಇದನ್ನೆಲ್ಲ ಸರಿಪಡಿಸಿ ಜಪಾನಿನ ವಿರುದ್ಧ ಸಂಗ್ರಾಮವನ್ನು ಯಶಸ್ವಿಯಾಗಿ ಸಾಗಿಸಲು ಇರುವ ಮಾರ್ಗ ರಾಷ್ಟ್ರೀಯ ಐಕ್ಯ ಒಂದೇ! ಈಗಲಾದರೂ ಕೊಮಿಂಟಾಂಗ್ ಸರ್ಕಾರವೂ ಚಿಯಾಂಗನೂ ಕಣ್ಣು ತೆರೆದು ನಿಜಸ್ಥಿತಿಯನ್ನರಿಯಲಿ—ಚೀನದ ರಾಷ್ಟ್ರೀಯ ಐಕ್ಯ ಸಾಧಿಸಲಿ—ಚೀನವನ್ನು ಉಳಿಸಲಿ!

## ನಾಳಿನ ಚೀನಾ

೧೯೩೭ರಲ್ಲಿ ಸಂಗ್ರಾಮ ಆರಂಭವಾದಾಗ ಎಲ್ಲರೂ ಚೀನದ ಸೋಲನ್ನು ೧೯೪೧ರಲ್ಲಿ ರಷ್ಯದ ಸೋಲನ್ನು ನಿರೀಕ್ಷಿಸಿದಂತೆಯೇ ನಿರೀಕ್ಷಿಸಿದ್ದರು. ಆದರೆ ವಿಖ್ಯಾತ ಅಮೆರಿಕನ್ ಪತ್ರಿಕೋದ್ಯೋಗಿ ಎಡ್ಗರ್ ಸ್ನೋ ಮಾತ್ರ "ಚೀನ ಎಂದಿಗೂ ಸೋಲಲಾರದು" ಎಂದು ಹೇಳಿದ. ಆತನು ಚೀನದಲ್ಲಿ ಬಹಳ ಕಾಲ ವಾಸಿಸಿ ಅಲ್ಲಿನ ನಿಜ ಸ್ಥಿತಿಗತಿಯನ್ನು ತಿಳಿದವನು. ಆತ ಚೀನದ ವಿಜಯದಲ್ಲಿ ಅಷ್ಟು ಭರವಸೆಯಿಡಲು ಕಾರಣ ಷಾನ್ಸಿ-ಕಾನ್ಸು-ನಿಂಗ್ಸಿಯ ಗಡಿಪ್ರಾಂತ್ಯದ ಜನತೆಯ ಸ್ವಾತಂತ್ರ್ಯಪ್ರೇಮ, ಜಪಾನೀ ವಿರೋಧ ಮತ್ತು ಚೀನವನ್ನುಳಿಸಲು ಎಂತಹುದನ್ನಾದರೂ ತ್ಯಾಗಮಾಡುವ ಅಚಲ ಮನೋ

ವೃತ್ತಿ. ಆದರಿಂದಲೇ ಚೀನ ಅಜೇಯವಾಗಿ ಉಳಿದಿರುವುದು. ಈ ಅಜೇಯ ಚೀನದ ರಾಜಧಾನಿಯೇ ಯೆನಾನ್. 'ಚೀನದ ಯುವಕರಿಗೆ ಯೆನಾನ್ ಹಾದಿಯೇ ಬಾಳಿನ ಹಾದಿ' ಎಂದಿದಾನೆ ಪ್ರಸಿದ್ಧ ಚೀನೀ ಸಾಹಿತಿ ಲೂ ಸೂನ್. ಆದಕ್ಕಾಗಿಯೇ ವಿದ್ಯಾಭ್ಯಾಸಕ್ಕಾಗಿ ಚೀನದ ಮೂಲೆ ಮೂಲೆ ಗಳಿಂದಲೂ ವಿದ್ಯಾರ್ಥಿ ವಿದ್ಯಾರ್ಥಿನಿಯರು ಯೆನಾನಿಗೆ ಬರುವುದು. ಕೆಲವು ವೇಳೆ ಎಷ್ಟೋ ಮಂದಿ ೫೦೦–೬೦೦ ಮೈಲಿಗಳನ್ನು ಕೂಡ ನಡೆದುಕೊಂಡು ಬಂದಿದ್ದಾರೆ. ಮಧ್ಯವರ್ಗದ ವ್ಯಾಪಾರಿಗಳು ಕೂಡ ತಮ್ಮ ಮಕ್ಕಳನ್ನು ಯೆನಾನಿಗೆ ಕಳುಹಲು ಪ್ರಯತ್ನಿಸುತ್ತಿದ್ದಾರೆ. ಸಿರಿವಂತರ ಮಕ್ಕಳೂ ಯೆನಾನಿಗೆ ಬಂದು ಬಡತನದ ಬಾಳನ್ನು ಅನುಭವಿಸಲು ಸಿದ್ಧರಾಗಿದ್ದಾರೆ. ಎಷ್ಟೋ ಮಂದಿ ಕೊಮಿಂಟಾಂಗ್ ಅಧಿಕಾರಿಗಳ ಮಕ್ಕಳು ಯೆನಾನಿಗೆ ಓಡಿಬಂದು ಅಲ್ಲಿ ಕಮ್ಯುನಿಸ್ಟರೊಂದಿಗೆ ಸೇರಿದ್ದಾರೆ. ಬಹಳ ಸಿರಿವಂತನಾದ ಒಬ್ಬ ಮಂಗೋಲನು ಯೆನಾನಿಗೆ ಓಡಿಬಂದು ಚೀನೀ ಕಮ್ಯುನಿಸ್ಟ್ ಪಾರ್ಟಿಯನ್ನು ಕೂಡಿಕೊಂಡನು. 'ನಮಗೆ ಜಪಾನೀಯರ ದಾಸರಾಗಿರಲು ಇಷ್ಟವಿಲ್ಲ. ನಾವು ಸ್ವತಂತ್ರರಾಗಿರಬೇಕು. ಚೀನದ ಕಮ್ಯುನಿಸ್ಟರು ಮಾತ್ರ ಜಪಾನಿನ ವಿರುದ್ಧ ಸಂಗ್ರಾಮ ನಡೆಸಲು ಶಕ್ತರು. ಆದುದರಿಂದಲೇ ನಾವು ಅವರೊಂದಿಗೆ ಸೇರಿಕೊಳ್ಳುತ್ತೇವೆ. ಯೆನಾನಿಗೆ ಬರುತ್ತೇವೆ'—ಎಂಬುವೇ ಇಂದಿನ ಚೀನೀ ಯುವಕ ಜನಾಂಗದ ಕೂಗು. 'ನ್ಯೂಸ್ ಕ್ರಾನಿಕಲ್' ಪತ್ರಿಕೆಯ ಪ್ರತಿನಿಧಿ ಗಂಥರ್ ಸ್ಟೇನ್ ೧-೧-'೪೫ರಂದು ಈ ರೀತಿ ಬರೆದಿದ್ದಾನೆ—

'ಯೆನಾನ್ ಇಂದು ಜಗತ್ತಿನ ಹಿರಿಯ ರಾಜಧಾನಿಗಳಲ್ಲೊಂದು. ಆಕ್ರಮಣ, ದಬ್ಬಾಳಿಕೆಗಳ ವಿರುದ್ಧವಾಗಿ ಮಾನವ ಪ್ರಗತಿಯ ಸಂಗ್ರಾಮವನ್ನು ನಿರ್ದೇಶಿಸುತ್ತಿರುವ ಕೇಂದ್ರಗಳಲ್ಲಿ ಯೆನಾನ್ ಬಲು ಮುಖ್ಯವಾದುದು.'

ಯೆನಾನಿನಿಂದಲೇ ಎಂಟನೆಯ ಸೈನ್ಯ ಮತ್ತು ನೂತನ ನಾಲ್ಕನೆಯ ಸೈನ್ಯಗಳ ಎಲ್ಲಾ ಕಾರ್ಯಕ್ರಮಗಳೂ ನಿರ್ದೇಶಿಸಲ್ಪಡುವುದು. ಈಗ ಈ ಸೈನ್ಯಗಳ ಒಟ್ಟು ಸಂಖ್ಯೆ ಆರು ಲಕ್ಷ. ಇದರ ಜತೆಗೆ ಜನತೆಯಲ್ಲಿ ಯಾವಾಗಲೂ ಸಿದ್ಧವಾಗಿರುವ ಪ್ರಾಂತಿಕ ಆತ್ಮರಕ್ಷಾ ಸೈನ್ಯಗಳ [Red Guards] ಸಂಖ್ಯೆ ೩೦ ಲಕ್ಷ. ಅಲ್ಲದೆ ಅಲ್ಲಲ್ಲಿ ಜನತೆಯ ಕಾವಲಿನ ಸೈನ್ಯಗಳು [Local Self-Defence Corps] ಕೆಲವು ಲಕ್ಷಗಳ ಸಂಖ್ಯೆಯು ಸದಾ ಸಿದ್ಧ

ಸೈನಿಕರನ್ನೊಳಗೊಂಡಿದೆ. ಷೇನ್ಸಿ-ಕಾನ್ಸು-ನಿಂಗ್ಸಿಯ ಪ್ರಾಂತ್ಯವನ್ನುಳಿದು ಯುದ್ಧಾರಂಭವಾದ ಮೇಲೆ ಜಪಾನೀಯರಿಂದ ಬಿಡುಗಡೆ ಮಾಡಿರುವ ಪ್ರದೇಶಗಳಲ್ಲಿನ ಜನಸಂಖ್ಯೆ ೯ ಕೋಟಿ. ಈ ಬಿಡುಗಡೆ ಹೊಂದಿದ ಪ್ರದೇಶಗಳಲ್ಲಿ ೧೨ ಪ್ರಾಂತಿಕ ಇಲ್ಲವೇ ಜಿಲ್ಲಾ ಸರ್ಕಾರಗಳೂ, ೮೫ ಜಿಲ್ಲಾಧಿಕಾರಿಗಳೂ, ೫೯೧ ನ್ಯಾಯಾಧಿಕಾರಿಗಳೂ ಕಾರ್ಯನಿರತರಾಗಿದ್ದಾರೆ. ಈ ಅಧಿಕಾರಿಗಳೆಲ್ಲರೂ ಜನತೆಯಿಂದಲೇ ಚುನಾಯಿತರಾದವರು.

ಈ ಕಮ್ಯುನಿಸ್ಟ್ ಸೈನ್ಯಗಳು ಜಪಾನರಿಂದ ೮೦೦ ಕಿಲೋಮೀಟರುಗಳಷ್ಟು ತೀರ ಪ್ರದೇಶವನ್ನು ವಶಪಡಿಸಿಕೊಂಡಿವೆ. ಈ ೭ ವರ್ಷಗಳ ಸಂಗ್ರಾಮದಲ್ಲಿ ಜಪಾನಿನಿಂದ ಆಕ್ರಮಿತವಾದ ಪ್ರದೇಶಗಳಲ್ಲಿಯೇ ಜಪಾನೀ ವಿರೋಧಿ ಜನತೆಯ ಸೈನ್ಯಗಳು ಈಗ ೫೭೦,೦೦೦ ಸೈನಿಕರನ್ನೂ ೨,೨೦೦,೦೦೦ ಸದಾ ಸಿದ್ಧ ಆತ್ಮರಕ್ಷಾ ಸೈನಿಕರನ್ನೂ ಹೊಂದಿವೆ. ಈ ಸಂಖ್ಯೆ ಈಗ ಕೊಮಿಂಟಾಂಗ್ ಅಧೀನದಲ್ಲಿರುವ ಸೈನ್ಯಗಳಷ್ಟೇ! ಕೊಮಿಂಟಾಂಗ್ ಸೈನ್ಯಗಳು ಇದುವರೆಗೂ ಜಪಾನಿಗೆ ಸೋತ ೭೨೧ ಪಟ್ಟಣಗಳಲ್ಲಿ ಶೇಕಡ ೮೨ರಷ್ಟು ಎಂದರೆ ೫೯೫ ಪಟ್ಟಣಗಳನ್ನು ಕಮ್ಯುನಿಸ್ಟ್ ಸೈನ್ಯಗಳು ಮತ್ತೆ ಜಪಾನರಿಂದ ಕಿತ್ತುಕೊಂಡು ೫೯೧ ಸ್ಥಳೀಯ ಸರ್ಕಾರಗಳನ್ನು ಸ್ಥಾಪಿಸಿವೆ. ನೂತನ ಚೀನದ ನಿರ್ಮಾಪಕರಾದ ಈ ಕಮ್ಯುನಿಸ್ಟ್ ಸೈನ್ಯಗಳೂ, ನಾಯಕರೂ ತಮ್ಮ ರಕ್ತ ಚೆಲ್ಲಿ ಚೀನವನ್ನು ಉಳಿಸಿಕೊಂಡು ಬಂದಿದ್ದಾರೆ—ಮುಂದೆಯೂ ಉಳಿಸುತ್ತಾರೆ—ಉಳಿಸುವವರೂ ಅವರೆ. ಆದರೆ ನಾಳಿನ ಚೀನ ಪ್ರತಿಗಾಮಿಗಳ ಕೈಗೆ ಸಿಕ್ಕಿ ಶೋಷಿತವಾಗಬಾರದೆಂಬುದೇ ಅವರ ಅಭಿಲಾಷೆ. ನಾಳಿನ ಚೀನ ನೂತನ ಚೀನವಾಗಬೇಕು. ನೂತನ ಚೀನದ ನಿರ್ಮಾಣಕ್ಕಾಗಿ ನಾವೇನು ಬೇಕಿದ್ದರೂ ಮಾಡಲು ಸಿದ್ಧರಿದ್ದೇವೆ. ಆದರೆ ಅದಕ್ಕೆ ಸರಿಯಾಗಿ ಕೇಂದ್ರದಲ್ಲಿ ಸರ್ವಪಕ್ಷೀಯ ಮಿಶ್ರಸರ್ಕಾರ ಏರ್ಪಡಬೇಕು. ಹಾಗಿದ್ದರೆ ಮಾತ್ರ ಅದರ ನಿರ್ಮಾಣ ಸಾಧ್ಯವೆನ್ನುವುದೇ ಅವರ ವಾದ.

ಚೀನದ ಕಮ್ಯುನಿಸ್ಟರು ಚೀನದ ಪ್ರಜಾಪ್ರಭುತ್ವಕ್ಕೆ ಅಡಿಗಲ್ಲು ಎಂದಿದ್ದಾನೆ ಚೀನದ ಮಹಾ ಸಾಹಿತಿ ಲಿನ್-ಯು-ಟಾಂಗ್. ೧೯೩೭ಕ್ಕೆ ಮೊದಲು ತಾವು ಅನುಸರಿಸುತ್ತಿದ್ದ ಸೋವಿಯಟ್ ನೀತಿಯನ್ನು ಬಿಟ್ಟುಕೊಟ್ಟು ಡಾ.

ಸನ್-ಯತ್-ಸೇನನ ಜನತೆಯ ಮೂರು ಸಿದ್ಧಾಂತಗಳ ಆಧಾರದ ಮೇಲೆ ಕಮ್ಯುನಿಸ್ಟರು ರಾಜ್ಯಾಡಳಿತ ನಡೆಸುತ್ತಿದ್ದಾರೆ. ಪ್ರತಿ ವರ್ಷವೂ ಚುನಾವಣೆ ಗಳಾಗುತ್ತವೆ. ೨೧ ವರ್ಷಕ್ಕೆ ಮೇಲ್ಪಟ್ಟ ಯಾರು ಬೇಕಾದರೂ ಉಮೇದು ವಾರರಾಗಿ ನಿಲ್ಲಬಹುದು. ಪ್ರತಿಯೊಬ್ಬರಿಗೂ ಹೆಣ್ಣು ಗಂಡೆನ್ನದೆ ಮತ ಕೊಡುವ ಹಕ್ಕಿದೆ. ಪ್ರತಿಯೊಬ್ಬರಿಗೂ ಯುದ್ಧಶಿಕ್ಷಣ ಆವಶ್ಯ. ಎಲ್ಲರೂ ಜಪಾನಿನ ವಿರುದ್ಧ ಸಂಗ್ರಾಮಕ್ಕೆ ಯಾವಾಗಲೂ ಸಿದ್ಧರಾಗಿರಬೇಕು. ಹಣ ಗಾರರಿಂದ ಹಣ—ಉಳಿದವರಿಂದ ಶಕ್ತಿ ಎನ್ನುವ ನಿಯಮವನ್ನು ಪಾಲಿಸಿ ಕೊಂಡು ಬಂದಿದ್ದಾರೆ ಇವರು. ಉಮೇದುವಾರರಾಗಲು ಯುದ್ಧರಂಗಕ್ಕೆ ಹೋಗುವವರಿಗೆ ಅಧಿಕಾರವಿಲ್ಲ. ೧೯೩೭ರಲ್ಲಿ ಚುನಾವಣೆಗಳಾದ ಮೇಲೆ ನೋಡಿದಾಗ ಚುನಾಯಿತರಲ್ಲಿ ಮುಕ್ಕಾಲು ಅಂಶ ಮಂದಿ ಆಗಲೇ ಯುದ್ಧ ರಂಗಕ್ಕೆ ತೆರಳಿದ್ದುದು ತಿಳಿಯಿತು. ಆ ರೀತಿ ಆಗದಂತೆ ನೋಡಿಕೊಳ್ಳುವುದ ಕ್ಕಾಗಿಯೇ ಯುದ್ಧರಂಗಕ್ಕೆ ತೆರಳುವವರು ಉಮೇದುವಾರಿಕೆಗೆ ಅನರ್ಹರೆಂದು ಹೇಳಿರುವುದು. ಇಲ್ಲಿಯೂ ಅವರು ಅನುಸರಿಸುತ್ತಿರುವ ಆಡಳಿತದ ನೀತಿಯೂ ಮೂರನೇ ಒಂದಂಶದ ವಿಧಾನ. ಸರ್ಕಾರವು ಕಮ್ಯುನಿಸ್ಟರ ಕೈಗೊಂಬೆ ಎನ್ನಲು ಅವಕಾಶವಿಲ್ಲವಾಗಿದೆ. ಪ್ರತಿಯೊಂದು ಹಳ್ಳಿಯಲ್ಲಿಯೂ ಗ್ರಾಮ ಸರ್ಕಾರ, ಸ್ಥಳೀಯ ಸರ್ಕಾರಗಳು ಚುನಾಯಿತವಾಗಿ ಸ್ಥಾಪಿತವಾಗುತ್ತವೆ. ಪ್ರತಿಯೊಂದು ಹಳ್ಳಿಯಲ್ಲಿಯೂ ಗ್ರಾಮರಕ್ಷಣಾ ಸಮಿತಿ ಕೂಡ ಸ್ಥಾಪಿತವಾಗು ತ್ತದೆ. ಇವುಗಳು ಮುಖ್ಯವಾಗಿ ಜಪಾನಿನ ವಿರುದ್ಧ ಸಂಗ್ರಾಮದಲ್ಲಿ ಸಹಾ ಯಕವಾಗುತ್ತವೆ.

ಪ್ರತಿ ಹಳ್ಳಿಯಲ್ಲಿಯೂ ಬಾಲಕರೆಲ್ಲರೂ ಬಾಲಸಂಘಗಳಲ್ಲಿ ಸಂಘಟಿತ ರಾಗಿದ್ದಾರೆ. 'ಮರಿ ಪಿಶಾಚಿಗಳು' ಎನ್ನುತ್ತಾರೆ ಜಪಾನರು ಇವರನ್ನು. ಈ ಬಾಲಕರು ಶತ್ರುಸೈನ್ಯಗಳ ವಲಯದಲ್ಲಿ ಅಳಿಲುಗಳು ಜೇಲಿಗಳ ಸಂದಿನಲ್ಲಿ ಓಡಾಡಿದಂತೆ ಓಡಾಡಿ ತಮ್ಮ ನಾಯಕರಿಗೆ ಅವಶ್ಯಕವಾದ ಸಮಾಚಾರಗಳನ್ನು ತಿಳಿದು ವರದಿ ಕೊಡುತ್ತಾರೆ. ಯುದ್ಧರಂಗಕ್ಕೆ ಸಾಮಾನುಗಳನ್ನು ಒಯ್ಯಲು ಸಹಾಯ ಮಾಡುವುದೇ ಅಲ್ಲದೆ ಗಾಯಗೊಂಡವರಿಗೆಲ್ಲರಿಗೂ ಚಿಕಿತ್ಸೆ ನಡೆಸಿ, ವಿಶ್ರಾಂತಿ ಗೃಹಗಳಿಗೆ ಒಯ್ಯುವವರೂ ಈ ಚಿಕ್ಕ ಬಾಲಕರೇ. ಇವರ ಕೆಲವು ಗುಂಪುಗಳು ಸೈನ್ಯದ ಹಿಂದೆಯೇ ಎಲ್ಲ ಪ್ರದೇಶಗಳಿಗೂ ಹೋಗಿ ಹಾಡುಗಳು,

ನಾಟಕಗಳು ಮುಂತಾದವುಗಳಿಂದ ಆ ಸೈನಿಕರಿಗೆ ಮನರಂಜನೆಯನ್ನುಂಟು ಮಾಡುತ್ತಿವೆ. ಸಾಮಾನ್ಯವಾಗಿ ಎಲ್ಲ ರೀತಿಯ ಗೂಢ ಸಮಾಚಾರಗಳನ್ನು ಒಯ್ಯುವವರೆಂದರೆ ಇವರೇ. ಪ್ರತಿಯೊಬ್ಬರೂ ಶಾಲೆಗೆ ಹೋಗಿ ತಾವೂ ಕಲಿಯುವುದಲ್ಲದೆ ಅನಕ್ಷರಸ್ಥರಾಗಿಯೇ ಉಳಿದಿರುವ ಹಿರಿಯರಿಗೂ ಕಲಿಸುತ್ತಾರೆ. ಎಲ್ಲ ಕಾರ್ಯದಲ್ಲಿಯೂ ಈ ಬಾಲಕರು ಮುಂದು. ಎಂತಹ ಕಾರ್ಯಕ್ಕಾದರೂ ಸಿದ್ಧ. ಇವರಿಗೆ ಮರಿಪಿಶಾಚಿಗಳೆನ್ನುವ ಹೆಸರು ಅನ್ವರ್ಥವಾಗಿದೆ—ಅದನ್ನು ಅವರು ಸಾರ್ಥಕಗೊಳಿಸಿಯೂ ಇದ್ದಾರೆ.

ಸ್ತ್ರೀಯರೆಲ್ಲರೂ ಸ್ತ್ರೀ ಸಂಘಗಳಲ್ಲಿ ಸುಸಂಘಟಿತರಾಗಿದ್ದಾರೆ. ಯುದ್ಧರಂಗಕ್ಕೆ ಹೋಗಿರುವವರ ಅವಶ್ಯಕತೆಗಳನ್ನು ತಯಾರಿಸುವ ಮುಖ್ಯ ಕಾರ್ಯ ಇವರದು. ಇವರಲ್ಲಿ ಎಷ್ಟೋ ಮಂದಿ ಸೈನಿಕರಾಗಿ ಹೋರಾಡುತ್ತಿದ್ದಾರೆ. ಸೈನಿಕರ ಅವಶ್ಯಕತೆಗಳು, ಚಿಕಿತ್ಸೆಯ ಸಾಮಾನುಗಳನ್ನು ತಯಾರಿಸಿ ಯುದ್ಧರಂಗಕ್ಕೆ ಕಳುಹಿಸುವುದರ ಜತೆಗೆ, ಯುದ್ಧರಂಗಕ್ಕೆ ಹೋಗುವ 'ಮರಿಪಿಶಾಚಿ'ಗಳಿಗೆ ಹಾಡು, ನಾಟಕಗಳನ್ನು ಕಲಿಸುತ್ತಾರೆ. ಎಷ್ಟೋ ವೇಳೆ ತಾವೂ ಆ ನಾಟಕ ಮತ್ತು ಗಾನ ಸಂಘಗಳೊಂದಿಗೆ ರಂಗಕ್ಕೆ ಹೋಗುತ್ತಾರೆ. ಜಮೀನುಗಳಲ್ಲಿ ಉತ್ತು ಬಿತ್ತುವ ಕೆಲಸದಲ್ಲಿಯೂ ಭಾಗವಹಿಸುವರು. ಕೆಲವರು ಸರ್ಕಾರದ ಆಡಳಿತದಲ್ಲಿ ಅಧಿಕಾರಿಗಳಾಗಿದ್ದಾರೆ. ಮುದುಕರೂ ಕೂಡ ಕೆಲಸ ಮಾಡದೆ ಇಲ್ಲ. ಇವರೆಲ್ಲರನ್ನೂ ಈ ರೀತಿ ಪ್ರೇರಿಸಿ, ಸ್ಫೂರ್ತಿ ಕೊಟ್ಟು ಕಾರ್ಯಕರ್ತರನ್ನಾಗಿಸಿರುವುದು ಒಂದೇ ಒಂದು ಮಹಾ ಭಾವನೆ—ಅದೇ ಚೀನದ ಸ್ವಾತಂತ್ರ್ಯ.

ಯೆನಾನಿನಲ್ಲಿ ಮೊದಲು ಕೆಂಪು ವಿಶ್ವವಿದ್ಯಾನಿಲಯಗಳು ಬೇಕಾದಷ್ಟು ಇದ್ದುವು. ಈಗ ಅವಕ್ಕೆ ಜಪಾನ್ ವಿರೋಧಿ ಮಿಲಿಟರಿ ಶಿಕ್ಷಣಾಲಯವೆಂದು ಹೆಸರಾಗಿದೆ. ಈ ಪಟ್ಟಣವಿರುವುದು ಬೆಟ್ಟದಲ್ಲಿ ಕೊರೆದ ಗುಹೆಗಳಲ್ಲಿ. ಅಲ್ಲಿಯೇ ಜನರ ವಾಸ, ವಿಶ್ವವಿದ್ಯಾನಿಲಯಗಳು ಎಲ್ಲವೂ. ಹಿಂದೆ ಜಪಾನೀಯರ ವಿಮಾನ ಧಾಳಿಯ ಫಲವಾಗಿ ಸಾವುನೋವುಗಳು ಬಹಳವಾಯಿತು. ಅದಕ್ಕೋಸ್ಕರ ರಕ್ಷಣೆಗಾಗಿ ಈ ಗುಹೆಯ ಗೃಹಗಳನ್ನು ಕಟ್ಟುವ ಯೋಜನೆ ಸಿದ್ಧವಾಯಿತು.

ಸೈನ್ಯದಲ್ಲಿ ಎಲ್ಲರೂ ಒಂದೇ ರೀತಿಯ ಉಡುಪುಗಳನ್ನು ಧರಿಸುತ್ತಾರೆ.

ನಾಯಕ ಚುಟೇಗೂ ಉಳಿದವರಿಗೂ ಯಾವ ರೀತಿಯ ವ್ಯತ್ಯಾಸವೂ ಇಲ್ಲ. ಹಿಂದೆ ಒಂದು ಬಾರಿ ಚುಟೇಯನ್ನು ಬಂಧಿಸಲು ಕೊಮಿಂಟಾಂಗ್ ಸೈನಿಕರು ಯತ್ನಿಸುತ್ತಿದ್ದಾಗ ಚುಟೇ ತನ್ನ ಮನೆಯಲ್ಲೇ ಸಿಕ್ಕಿಬಿದ್ದ. ಚುಟೇ ಎಲ್ಲಿ ಎಂದು ಸೈನಿಕರು ಕೇಳಲು 'ಇಲ್ಲ'ವೆಂದೂ ತಾನು ಅಲ್ಲಿಯ ಮುಖ್ಯ ಅಡಿಗೆ ಯವನೆಂದೂ ಹೇಳಿಕೊಂಡು ತಪ್ಪಿಸಿಕೊಂಡ. ಸೈನ್ಯದ ಶಿಸ್ತು ಅಮೋಘ ವಾದುದು. ಪ್ರತಿಯೊಬ್ಬ ಸೈನಿಕನಿಗೂ ಎಲ್ಲಿ ಯಾವಾಗ ಏನು ಮಾಡಬೇಕು ಯಾವ ರೀತಿಯಲ್ಲಿ ನಡೆದುಕೊಳ್ಳಬೇಕೆಂಬುದು ತಿಳಿದಿದೆ. ಯಾವ ಸೈನಿಕನೂ ಆ ಶಿಸ್ತನ್ನು ಅತಿಕ್ರಮಿಸಿ ನಡೆಯುವುದಿಲ್ಲ. ಜನಗಳಲ್ಲಿ ವಿಶ್ವಾಸ ತೋರಿ ಜನ ಪ್ರಿಯರಾಗುವುದು ಸೈನಿಕರ ಮೊದಲ ಕರ್ತವ್ಯ. ಎಲ್ಲ ಬಂಡವಲಿಗ ರಾಷ್ಟ್ರ ಗಳಂತೆ ಕೊಮಿಂಟಾಂಗ್ ಸೈನ್ಯಗಳೂ ಲಂಚಕೋರತನ, ಸೂಳೆಗಾರಿಕೆ, ಲೂಟಿಗಳಿಗೆ ಸಾಮಾನ್ಯವಾಗಿ ಮನಗೊಡುತ್ತವೆ. ಆದರೆ ಕಮ್ಯುನಿಸ್ಟ್ ಸೈನ್ಯ ಗಳು ಅವುಗಳಿಂದ ದೂರವಾಗಿರಲೇಬೇಕೆಂಬ ನಿಯಮವಿದೆ. ಸೈನ್ಯಕ್ಕೂ ಸಾಮಾನ್ಯ ಜನತೆಗೂ ಮಧುರ ಬಾಂಧವ್ಯವಿದ್ದರೆ ಮಾತ್ರ ತಾವು ಉಳಿಯು ವುದು ಸಾಧ್ಯವೆಂಬುದು ಕೆಂಪುಸೈನಿಕರಿಗೆ ಮನದಟ್ಟಾಗಿದೆ. ಶತ್ರುವಿನ ಸೈನ್ಯಗಳು ಆಕ್ರಮಿಸಿರುವ ಪ್ರದೇಶಗಳಲ್ಲೇ ಆದರೂ ಜನರ ಸಹಾಯವಿಲ್ಲದೆ ಏನು ಮಾಡಲೂ ಸಾಧ್ಯವಿಲ್ಲ. ಜನಪ್ರಿಯವಾದರೆ ಚೀನದ ಬಿಡುಗಡೆ ಶೀಘ್ರ ವಾದೀತು. ಗೆರಿಲ್ಲಾ ಸೈನ್ಯಗಳನ್ನು, ಪ್ರಾಂತಿಕ ಆತ್ಮರಕ್ಷಾ ಸೈನ್ಯಗಳನ್ನು ಸ್ಥಳೀಯ ಜನರಿಂದಲೇ ಸೇರಿಸಲು [illegible]ಯತೆಯಿಲ್ಲದಿದ್ದರೆ ಅಸಾಧ್ಯ. ಎಂತಲೇ ಕಮ್ಯುನಿಸ್ಟ್ ಸೈನ್ಯಗಳ ಬೆನ್ನೆಲುಬು ಜನತೆ!

ಯುದ್ಧಕ್ಕೆ ಹೊರಡುವ ಮುನ್ನ ಎಲ್ಲರೂ ಯಾವ ರೀತಿಯಲ್ಲಿ ಯುದ್ಧ ನಡೆಸಬೇಕೆಂಬುದನ್ನು ಭೂಪಟಗಳನ್ನಿಟ್ಟುಕೊಂಡು ಯೋಚಿಸಿ ವಿಮರ್ಶಿಸು ತ್ತಾರೆ. ಸಾಮಾನ್ಯ ಸೈನಿಕನಿಗೂ ಈ ಯೋಜನೆ ತಿಳಿದಿರುವುದರಿಂದ ಅವನು ಕೂಡ ನಾಯಕತ್ವ ವಹಿಸಲು ಸಾಧ್ಯವಿರುತ್ತದೆ. ರಷ್ಯದ ಕೆಂಪುಸೇನೆಯ ವಿಷಯವಾಗಿ ಹೇಳುವ ಮಾತನ್ನೇ ಚೀನದ ಕೆಂಪುಸೈನ್ಯಗಳ ವಿಷಯದಲ್ಲಿಯೂ ಹೇಳಬಹುದು. ಚೀನದ ಕಮ್ಯುನಿಸ್ಟ್ ಸೈನ್ಯವು ತನ್ನ ತಲೆಯ ಬುದ್ಧಿಯ ಸಹಾಯದಿಂದ ಮುನ್ನಡೆಯುತ್ತದೆ. ಪ್ರತಿಯೊಬ್ಬ ಸೈನಿಕನಿಗೂ ರಾಜಕೀಯ ಜ್ಞಾನವಿದೆ; ಸಂಗ್ರಾಮದ ಸಂಪೂರ್ಣ ಯೋಜನೆ ತಿಳಿದಿದೆ. ಇದರಿಂದಲೇ

ಚೀನದ ಕಮ್ಯುನಿಸ್ಟ್ ಸೈನ್ಯಗಳು ಜಪಾನರನ್ನು ಹಿಂದಕ್ಕಟ್ಟಲು ಸಾಧ್ಯವಾಗಿರುವುದು. ಅಜೇಯ ಚೀನದ ಅಮರ ಯೋಧರಾಗಿರುವುದು.

ಚೀನದ ಸಂಗ್ರಾಮ ಪ್ರಯತ್ನ ಮತ್ತು ಅನುಭವದಿಂದ, ಮುಖ್ಯವಾಗಿ ಭಾರತದ ಇಂದಿನ ಸ್ಥಿತಿಯಲ್ಲಿ ನಾವು ಕಲಿಯಬೇಕಾದುದು ಬಹಳವಿದೆ. ೧೦ ವರ್ಷಗಳ ಅಂತರ್ಯುದ್ಧದ ಫಲವಾಗಿ ಜಪಾನೀಯರು ದೇಶವನ್ನೇ ನುಂಗುವ ಯತ್ನ ಹೂಡಲು ಸಾಧ್ಯವಾಯಿತು. ಇತ್ತ ನಮ್ಮ ಅನೈಕ್ಯತೆಯ ಫಲವಾಗಿ ನಾವಿನ್ನೂ ದಾಸ್ಯದಲ್ಲಿಯೇ ಉಳಿದಿದ್ದೇವೆ. ನಾಡಿಗೆ ನಾಡೇ ಉಲ್ಬಣ ಸ್ಥಿತಿಯಲ್ಲಿರುವಾಗ ನಾವು ಕೂಡ ಅನೈಕ್ಯತೆಯ ಹಾದಿ ಬಿಟ್ಟು ಐಕ್ಯತೆ ಸಾಧಿಸಿ ಸ್ವಾತಂತ್ರ್ಯ ಸಾಧಿಸಬೇಕು. ನಾಳಿನ ಭಾರತ ಭವ್ಯ ಭಾರತವಾಗಿರಬೇಕೇ ವಿನಃ ದಾಸ್ಯಭಾರತವಲ್ಲ. ನಾಳಿನ ಚೀನದ ನಿರ್ಮಾಪಕರಾದ ಚೀನದ ಯುವಕರೂ ಯುವತಿಯರೂ ಅಮರ ಯೋಧರೂ ನಮಗೆ ಕೊಡುವ ಉದಾಹರಣೆಯನ್ನು ನಾವೂ ಅನುಸರಿಸಬೇಕು. ಚೀನದಲ್ಲಿ ಯಾವ ವಿಧದಲ್ಲಿ ಐಕ್ಯತೆಯೇ ಸ್ವಾತಂತ್ರ್ಯ ಮಾರ್ಗವೋ ಅದೇ ರೀತಿಯಲ್ಲಿ ಭಾರತದಲ್ಲಿಯೂ ಐಕ್ಯತೆಯೊಂದೇ ಸ್ವಾತಂತ್ರ್ಯ ಸಾಧಕ. ಆ ಐಕ್ಯತೆಗಾಗಿ ಎಲ್ಲರೂ ದುಡಿಯಬೇಕಾಗಿದೆ. ಐಕ್ಯತೆ ಬಲಿಯಿತು; ಎಲ್ಲ ರೀತಿಯ ದಬ್ಬಾಳಿಕೆ, ಶೋಷಣೆಗಳು ಅಳಿಯಬೇಕು. ನಾಳಿನ ಭಾರತ ಸ್ವತಂತ್ರ ಭಾರತವಾಗಬೇಕು. ನಾಳಿನ ನೂತನ ಚೀನದೊಂದಿಗೆ ನೂತನ ಭಾರತ ಭುಜಕ್ಕೆ ಭುಜ ಕೊಟ್ಟು ನಿಲ್ಲಬೇಕು. ಆಗ ಮಾತ್ರ ನಮ್ಮ ಉಳಿವು ಸಾರ್ಥಕವಾದೀತು.

ಇನ್ನೂ ತನ್ನ ಸಮಸ್ಯೆ ಪೂರ್ಣವಾಗಿ ಬಿಡಿಸದಿರುವ ಆಧುನಿಕ ಚೀನ ಇಂದು ಉಳಿಯಲಿರುವ ಒಂದೇ ಮಾರ್ಗ ಐಕ್ಯತೆ. ಕಮ್ಯುನಿಸ್ಟ್–ಕೊಮಿಂಟಾಂಗ್ ಐಕ್ಯತೆಯಿಲ್ಲದೆ ಖಂಡಿತವಾಗಿಯೂ ಚೀನ ಉಳಿಯಲಾರದು. ಚಿಯಾಂಗ್, ಕಮ್ಯುನಿಸ್ಟರ ಸೂಚನೆಗಳ ಆಧಾರದ ಮೇಲೆ ಅವರೊಂದಿಗೆ ಒಪ್ಪಂದಕ್ಕೆ ಬಂದರೆ ಮಾತ್ರ ವಿಸ್ಮೃತ ರೋಗಿಯಾಗಿದ್ದ ಚೀನ ಅಜೇಯ ಚೀನವಾದೀತು. ಇಲ್ಲವಿದ್ದರೆ ಅಂತರ್ಯುದ್ಧದ ಬೆಂಕಿಯಲ್ಲಿ ಬೂದಿಯಾದೀತು. ಹಾಗಾಗದಿರಲಿ ಎಂದು ಆಶಿಸೋಣ.

ಚಿಯಾಂಗ್ ಚಿಂತಿಸಲಿ. ಜಗತ್ತು ಮುನ್ನಡೆದಂತೆ ಚೀನವೂ ಮುನ್ನಡೆಯಬೇಕು. ಪ್ರಗತಿಯ ಪ್ರವಾಹಕ್ಕೆ ತಡೆಕಟ್ಟಿದರೆ ಪ್ರವಾಹ ನಿಲ್ಲುವುದೇನು?

ಅದನ್ನು ಚಿಯಾಂಗ್ ಮರೆಯದಿರಲಿ. ಆಗ ನಿಜವಾಗಿಯೂ ಜಪಾನಿಗೆ ಮೃತ್ಯು ಸನ್ನಿಹಿತವಾದಂತೆಯೇ. ಈಗಿನ ಅಜೇಯ ಚೀನ ಅಂದು ವಿಜಯೀ ಚೀನವಾಗಿ ಮುಂದೆ ನೂತನ ಚೀನವಾಗುವುದು ಸಾಧ್ಯ. ಅದೇ ಎಲ್ಲ ರಾಷ್ಟ್ರ ಪ್ರೇಮಿಗಳ ಇಚ್ಛೆ. ಆಸೆ-ಭರವಸೆ.

ಚೀನ ನಿಜವಾಗಿ ಅಜೇಯವಾಗಿಯೇ ಉಳಿಯುತ್ತದೆ. ಜಪಾನ್ ಖಂಡಿತವಾಗಿಯೂ ಸೋಲುತ್ತದೆ. ಆದರೆ ಅದು ಸಾಧ್ಯವಾಗಲು ಇರುವ ಒಂದೇ ಮಾರ್ಗ—ಐಕ್ಯತೆ! ಐಕ್ಯತೆಯ ಅಡಿಗಲ್ಲಿನ ಮೇಲೆ ಇಂದಿನ ಕಮ್ಯೂನಿಸ್ಟರು ಕಟ್ಟುತ್ತಿರುವ ಚೀನವೇ ಅಜೇಯ ಚೀನ—ನೂತನ ಚೀನ.





ಹೊಸ ವರ್ಷದ ಹೊಸವರಲ್ಲಿ

ಕನ್ನಡ ನಾಡಿಗೆ

ಕನ್ನಡ ಕಲಾಮಯ ಚಿತ್ರದ ಕಾಣಿಕೆ

ಶ್ರೀ ಗುಬ್ಬಿ ಫಿಲಮ್ಸ್ನವರ ಭಕ್ತಿರಸಪ್ರಧಾನ ಚಿತ್ರ

# ಹೇಮರೆಡ್ಡಿ ಮಲ್ಲಮ್ಮ



— ನಟವರ್ಗ —

ವಿನೋದರತ್ನಾಕರ ಜಿ. ಎಚ್. ವೀರಣ್ಣ

ಅಭಿನವ ಭಕ್ತಶಿರೋಮಣಿ ಸಿ. ಬಿ. ಮಲ್ಲಪ್ಪ

ಬಿ. ರಾಜಮ್ಮ, ಹೊನ್ನಪ್ಪ ಭಾಗವತರ್



— ನಿರ್ದೇಶನ —

ಶ್ರೀ ಸೌಂದರರಾಜನ್



ಮದ್ರಾಸಿನ ನ್ಯೂಟೋನ್ ಸ್ಟುಡಿಯೋನಲ್ಲಿ

ಸಿದ್ಧವಾಗುತ್ತಿದೆ.

— ಹಂಚಿಕೆ —

## ಕರ್ನಾಟಕ ಫಿಲಮ್ಸ್ ಲಿಮಿಟೆಡ್

೩೭, ಗಾಂಧಿನಗರ, ಬೆಂಗಳೂರು ಸಿಟಿ.



KATAKA